




# ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್

# ಜೀವನದ ಸುಸ್ಥಿರ ದೇಣಿಗೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯು ದಯಾಸಾಗರನಾಗಿದ್ದಾನೆ. ಕಷ್ಟದಲ್ಲಿದ್ದವರಿಗೆ, ದುಃಖದಲ್ಲಿರುವವರಿಗೆ ಆತ ಪರಿಹಾರದ ಆಶ್ರಯಸ್ಥಾನ. ನೋವು ನಷ್ಟಗಳಲ್ಲಿ ತಂಪನ್ನೆರೆಯುವ ದಿವ್ಯವಾದ ಅನುಪಮವಾದ, ಕರುಣೆ ಆತನದು.

ಶ್ರೀನಿವಾಸನ ದಿವ್ಯ ಕರುಣೆಯಿಂದ ಪ್ರೇರಿತವಾಗಿ ತಿರುಮಲ ತಿರುಪತಿ ದೇವಸ್ಥಾನಗಳು ದೀನರ, ಅಗತ್ಯವಿದ್ದವರ ನೋವು ದುಃಖಗಳನ್ನು ಪರಿಹರಿಸಲು ಹಲವಾರು ಆಸ್ಪತ್ರೆಗಳನ್ನು, ಧಾರ್ಮಿಕ ಸಂಸ್ಥೆಗಳನ್ನು ಏರ್ಪಡಿಸಿದೆ. ತಿ. ತಿ. ದೇವಸ್ಥಾನಗಳ ಪಾಲಿಗೆ ದೀನರ ದುಃಖ ದುಮ್ಮಾನಗಳ ಪರಿಹಾರವೇ ದಿವ್ಯವಾದ ಗಮ್ಯ; ಜಾತಿ, ಮತ, ಪಂಥಗಳಿಗೆ ಅತೀತವಾದ ಜೀವಂತ ಪರಂಪರೆಯಾಗಿದೆ. ತೀವ್ರತರವಾದ ಅನಾರೋಗ್ಯದಿಂದ ನರಳುವಂತಹ ದೀನ ದುಃಖಿಗಳಿಗೆ ತಕ್ಕ ಪರಿಹಾರ ನೀಡುವ ಚಿಕಿತ್ಸಾವಿಧಾನದ ಯೋಜನೆಯನ್ನು ತಿ. ತಿ. ದೇವಸ್ಥಾನಗಳು ಈಗ ಕೈಗೆತ್ತಿಕೊಂಡಿದೆ.

**ಧ್ಯೇಯೋದ್ದೇಶಗಳು :** ಭಾರತದ ಆಂಧ್ರಪ್ರದೇಶದಲ್ಲಿನ ತೀರ್ಥಕ್ಷೇತ್ರವಾದ ತಿರುಪತಿಯಲ್ಲಿ ನೊಂದಾಯಿತಗೊಂಡಿರುವ ತಿ. ತಿ. ದೇವಸ್ಥಾನಗಳ ಆಶ್ರಯದ ಒಂದು ಧಾರ್ಮಿಕ ಸಂಸ್ಥೆ ''ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್'' ಆಗಿದ್ದು ಬಡ ರೋಗಿಗಳಿಗೆ ನೆರವು ನೀಡುವ ಲಾಭರಹಿತ ಧಾರ್ಮಿಕ ಸಂಘಟನೆಯಾಗಿದೆ.

ಈ ಯೋಜನೆಯನ್ವಯ ಪ್ರಾಣಾಪಾಯವನ್ನುಂಟುಮಾಡುವ - ಹೃದಯ, ಮೂತ್ರಪಿಂಡ, ಮೆದುಳು ರೋಗಗಳೇ ಅಲ್ಲದೆ ಕ್ಯಾನ್ಸರ್ ಮೊದಲಾದ ತೀವ್ರತರ ಖಾಯಿಲೆಗಳಿಗೆ ಹೆಚ್ಚಿನ ಹಣ ಬಯಸುವ ಚಿಕಿತ್ಸಾ ವಿಧಾನಗಳನ್ನು ಭರಿಸಲು ಶಕ್ತಿಯಿಲ್ಲದ ಬಡವರಿಗೆ ನೆರವಿನ ಕೈನೀಡಿ ಸಹಾಯ ಮಾಡಲಾಗುವುದು. ತಿ. ತಿ. ದೇವಸ್ಥಾನಗಳ ಎಲ್ಲ ಆಸ್ಪತ್ರೆಗಳಲ್ಲಿಯೂ - ಸ್ವಿಮ್ಸ್, ಬರ್ಡ್, ರೂಯಾ, ಆಸ್ಪತ್ರೆಗಳು ಹಾಗೂ ಪ್ರಸೂತಿ ಆಸ್ಪತ್ರೆಗಳಲ್ಲಿ - ಬಡವರಿಗೆ ಜಾತಿ ಮತ ಪಂಥಗಳ ಭೇದವಿಲ್ಲದೆ ನೆರವಿನ ಹಸ್ತ ಚಾಚಿ ಚಿಕಿತ್ಸೆ ನೀಡಲಾಗುತ್ತದೆ.

ಮೂತ್ರಕೋಶ ವೈಫಲ್ಯ, ಹೆಮಾಫೀಲಿಯ, ತಲಸ್ಸೆಮಿಯ, ಕ್ಯಾನ್ಸರ್ ಮೊದಲಾದ ದೀರ್ಘಕಾಲಿಕ ರೋಗಗಳ ಬಗ್ಗೆ ಸಂಶೋಧನೆ, ಪರಿಹಾರೋಪಾಯ ಪ್ರಯತ್ನಗಳಿಗೂ ಈ ಯೋಜನೆಯನ್ವಯ ಅವಕಾಶವಿದೆ. ಬಡರೋಗಿಗಳಿಗೆ ಉಚಿತವಾಗಿ ರಕ್ತ, ಕೃತಕ ಅಂಗಾಂಗಗಳು, ಫಿಜಿಯೋಥೆರಪಿ, ಮೊದಲಾದ ಪ್ರಾಥಮಿಕ ಆರೋಗ್ಯ ಪರಿಕರಗಳು, ಪರಿಪೂರಕಗಳು ದೊರೆಯುವಂತೆ ಮಾಡುವುದೇ ತಿ. ತಿ. ದೇವಸ್ಥಾನಗಳು ರೂಪಿಸಿರುವ ವಿಶೇಷವಾದ ''ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಯ'' ಗುರಿ.

**ತಿ. ತಿ. ದೇ. ಸಹಯೋಗ :** ಈ ದತ್ತಿ ನಿಧಿಯ ಸ್ವಯಂ ಪೂರ್ಣವಾಗುವಂತೆ ಮಾಡಲು ತಿ. ತಿ. ದೇವಸ್ಥಾನಗಳು ಯೋಜನೆಗೆ ಬರುವ ದಾನಗಳಿಗೆ ತಕ್ಕ ಮೂಲಬಂಡವಾಳವನ್ನು ಬಿಡುಗಡೆ ಮಾಡಲು ಯೋಜಿಸಿದೆ.

**ದಾನಿಗಳಿಗೆ ದೊರೆಯುವ ಸೌಲಭ್ಯಗಳು :** ಈ ಯೋಜನೆಗೆ ಐದು ಲಕ್ಷ ರೂಪಾಯಿ ಹಾಗೂ ಅಧಿಕ ಮೊತ್ತದ ಧನವನ್ನು ನೀಡುವ ದಾನಿಗಳಿಗೆ ಕೆಳಕಂಡ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುವುದು.

1. ದಾನಿಯೂ ಸೇರಿದಂತೆ ಐವರಿಗೆ ವರ್ಷಕ್ಕೆ ಒಮ್ಮೆ ಮೂರು ದಿನಗಳು ವಿ.ಐ.ಪಿ. ದರ್ಶನವನ್ನು ವೈಕುಂಠದ ಸೆಲ್ಲಾರ್ ಮೂಲಕ ಅನುಮತಿಸಲಾಗುವುದು.

2. ದಾನಿಯ ಮೊದಲನೆಯ ದರ್ಶನ ಕಾಲದಲ್ಲಿ ಸ್ವಾಮಿ ಹಾಗೂ ಅಮ್ಮನವರ ಚಿನ್ನದ ಮುಲಾಮಿನ ರಜತ ಚಿತ್ರಗಳಿರುವ ಜ್ಞಾಪಿಕೆಯನ್ನು ನೀಡಲಾಗುವುದು.

3. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ಬಹೂಕರಿಸಲಾಗುವುದು.

4. ತಿರುಮಲೆಯ ಸಾಮಾನ್ಯ ಅತಿಥಿಗೃಹಗಳಲ್ಲಿ ವರ್ಷಕ್ಕೆ ಒಮ್ಮೆ ಒಟ್ಟಿಗೆ ಮೂರುದಿನ ಉಚಿತವಾಗಿ (ದೊರಕುವಂತಿದ್ದ ಪಕ್ಷದಲ್ಲಿ ಶುಲ್ಕ ಸಹಿತವಾದ ವಿ.ಐ.ಪಿ. ವಸತಿ) ವಸತಿಯನ್ನು ಒದಗಿಸಲಾಗುವುದು.

5. ವೈಯಕ್ತಿಕ ದಾನಿಗಳ ಜೀವಮಾನ ಪರ್ಯಂತವೂ, ಸಂಸ್ಥೆ, ಕಂಪನಿ, ಅವಿಭಕ್ತ ದಾನಿಗಳಿಗೆ 20 ವರ್ಷವೂ ಈ ಸೌಲಭ್ಯ ಉಂಟು.

ಆದಾಯತೆರಿಗೆ ವಿನಾಯತಿ : 80 (ಜಿ) ಕಲಮಿನನ್ವಯ ದಾನಿಯು ಆದಾಯ ತೆರಿಗೆ ವಿನಾಯಿತಿ ಪಡೆಯಬಹುದು.

**ವಿನಂತಿ :** ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಗೆ ಉದಾರವಾಗಿ ವಂತಿಗೆಗಳನ್ನು ನೀಡಬೇಕೆಂದೂ ಆ ಮೂಲಕವಾಗಿ ಸಾವಿರಾರು ಹೃದಯ, ಮೂತ್ರಕೋಶ, ಮೆದುಳು ರೋಗಿಗಳಿಗೆ ನೆರವು ನೀಡಬೇಕೆಂದೂ ವಿನಂತಿಸಿಕೊಳ್ಳಲಾಗಿದೆ. ತಾವು ನೀಡುವ ಪ್ರತಿ ಕಾಣಿಕೆಯೂ ಪವಿತ್ರವಾಗಿ ಬಡವರಿಗೆ ಆಧಾರವಾಗಿ ಅವರು ಜೀವನವನ್ನು ಪರಿಪೂರ್ಣ ಆರೋಗ್ಯದಿಂದ ಕಳೆಯಲು ಅನುಕೂಲ ಮಾಡಿಕೊಡುತ್ತದೆ.

**ಮಾನವ ಸಮಾಜಕ್ಕೆ ಸೇವೆ ಸಲ್ಲಿಸುವುದರಿಂದ ದೇವರ ಸೇವೆಯನ್ನು ಸಲ್ಲಿಸಿರಿ**

ತಮ್ಮ ಎಲ್ಲ ದಾನಗಳೂ ಕಾರ್ಯನಿರ್ವಹಣಾಧಿಕಾರಿ ಶ್ರೀವೆಂಕಟೇಶ್ವರ ಪ್ರಾಣದಾನ ಟ್ರಸ್ಟ್ ತಿ.ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ರೂಪದಲ್ಲಿದ್ದು, ಅವುಗಳನ್ನು ಕಳುಹಿಸಬೇಕಾದ ವಿಳಾಸ - **ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ಆಡಳಿತ ಭವನ. ಕೆ.ಟಿ. ರಸ್ತೆ, ತಿರುಪತಿ – 517 507.**

**ದಾನಿಗಳಾಗಿರಿ – ದುಃಖಿಗಳಿಗೆ ಜೀವದಾನ ಮಾಡಿರಿ.**





ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವರ ವೆಂಕಟೇಶ ॥ ಪ ॥

ನಾಲಿಗೆಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ
ವಿಶಾಲ ಕರ್ಣಕೆ ಭೂಷಣ ವಿಷ್ಣುಕಥೆಯು ॥ 1 ॥

ದಾನವೆ ಭೂಷಣ ಇರುವ ಹಸ್ತಗಳಿಗೆ
ಮಾನವೆ ಭೂಷಣ ಮಾನವರಿಗೆ
ಜ್ಞಾನ ಭೂಷಣ ಮುನಿಯೋಗಿ ವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು ॥ 2 ॥



ರಂಗನನು ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರಭೂಷಣ
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ

-ಶ್ರೀಪಾದರಾಜರು.



ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ತಿರುಮಲೆ

# ವಾರ್ಷಿಕ ಜ್ಯೇಷ್ಠಾಭಿಷೇಕ

## 22-6-2002 ರಿಂದ 24-6-2002 ವರೆಗೆ

| | | |
|---|---|---|
| 22-6-2002 | ಶನಿವಾರ | ವಜ್ರಕವಚ ಸಮರ್ಪಣೆ. |
| 23-6-2002 | ಭಾನುವಾರ | ಮುತ್ತಂಗಿ ಸಮರ್ಪಣೆ. |
| 24-6-2002 | ಸೋಮವಾರ | ಸುವರ್ಣ ಕವಚ ಸಮರ್ಪಣೆ. |

ಸೂಚನೆ : ಜ್ಯೇಷ್ಠ ಮಾಸದ ಜ್ಯೇಷ್ಠಾ ನಕ್ಷತ್ರದಲ್ಲಿ ನಡೆಯುವ ಈ ಉತ್ಸವದಲ್ಲಿನ ಸ್ವಾಮಿಯ ಚಿತ್ರಗಳನ್ನು ಒಳಗೆ ಬಹುವರ್ಣದಲ್ಲಿ ನೀಡಲಾಗಿರುವುದನ್ನು ಗಮನಿಸಬಹುದು.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

ತಿರುಚಾನೂರು

# ವಾರ್ಷಿಕ ಪ್ಲವೋತ್ಸವ

## 20-6-2002 ರಿಂದ 24-6-2002

| | | |
|---|---|---|
| 20-6-2002 | ಗುರುವಾರ | ಶ್ರೀಕೃಷ್ಣಸ್ವಾಮಿ ಪ್ಲವೋತ್ಸವ. |
| 21-6-2002 | ಶುಕ್ರವಾರ | ಶ್ರೀ ಸುಂದರರಾಜಸ್ವಾಮಿ ಪ್ಲವೋತ್ಸವ. |
| 22-6-2002 | ಶನಿವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |
| 23-6-2002 | ಭಾನುವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |
| 24-6-2002 | ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |

ಸೂಚನೆ : ತಿರುಚಾನೂರು ತಿರುಪತಿಯಿಂದ ಐದುಕಿಲೋಮೀಟರ್ ದೂರದಲ್ಲಿದೆ. ಒಂದರ ಹಿಂದೆ ಒಂದರಂತೆ ತಿರುಪತಿಯಿಂದ ಬಸ್ ಸೌಕರ್ಯವಿದೆ. ಜ್ಯೇಷ್ಠ ಮಾಸದ ಪೂರ್ಣಿಮೆಯ ಬೆಳಕಿನಲ್ಲಿ ವಿದ್ಯುದ್ದೀಪಾಲಂಕಾರಗಳ ವರ್ಣಮಯ ಹಿನ್ನೆಲೆಯಲ್ಲಿ ತಿರುಚಾನೂರು ಪದ್ಮಸರೋವರದಲ್ಲಿ ನಡೆಯುವ ಈ ತೆಪ್ಪೋತ್ಸವಗಳನ್ನು ನೋಡುವುದೇ ಒಂದು ಆನಂದ.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ

ಸಂಪುಟ - 33 ಜೂನ್ 2002 ಸಂಚಿಕೆ - 1

## ವೈಶಾಖ - ಜ್ಯೇಷ್ಠ ಸಂಚಿಕೆ

### ವಿಷಯಸೂಚಿ


| | | |
|---|---|---|
| ಸಂಪಾದಕೀಯ | | 4 |
| ಪ್ರಾತಃಸ್ಮರಣೀಯ ಶ್ರೀಪಾದರಾಜರು | ಡಾ॥ ಎನ್.ಕೆ. ರಾಮಶೇಷನ್ | 5 |
| ಶ್ರೀಪಾದರಾಜ ವಿರಚಿತ ನೃಸಿಂಹ ದಂಡಕ | ಪ್ರೊ॥ ಕೆ. ಆರ್. ನರಸಿಂಹನ್ | 8 |
| ಸಾಲಗ್ರಾಮದ ವಿಚಾರ | ಪ್ರೊ॥ ಸಿ. ಗೋವಿಂದಾಚಾರ್ | 14 |
| ದಾಸಸಾಹಿತ್ಯ - ಸದಾಚಾರ | ಸು. ಶ್ರೀನಿವಾಸ ಮಠದ | 19 |
| ತಿರುಮಲ - ತಿರುಪತಿ - ತಿರುಚಾನೂರು | ಎಸ್. ವಿ. ಹೇಮಾವತಿ | 27 |
| ತಿ. ತಿ. ದೇ. ಖಜಾನೆ | | 33 |
| ಏಪ್ರಿಲ್ ತಿಂಗಳಿನಲ್ಲಿ ಶ್ರೀವಾರಿ ಸೇವೆ | | 35 |
| ಪದ್ಮಿನೀ ಪರಿಣಯ | ಕಂದಾಡೈ ಕೇಶವನ್ | 37 |
| ವಾರ್ತಾಲಹರಿ | | 41 |


ಮುಖಚಿತ್ರ : ಶ್ರೀ ಮಲೆಯಪ್ಪಸ್ವಾಮಿ - ತಿರುಮಲೆ.

ಹಿಂಬದಿಯಲ್ಲಿ : ಯೋಗಾಂಜನೇಯಸ್ವಾಮಿ - ಚಿತ್ರ - ಜಿ. ಚಂದ್ರಶೇಖರ್.


ಗೌರವ ಸಂಪಾದಕರು :
**ಡಾ॥ ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಡಾ॥ ಎನ್.ಎಸ್. ರಾಮಮೂರ್ತಿ,

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ.,ಎಲ್.ಪಿ.ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
ವಿ. ಎನ್. ಶ್ರೀನಿವಾಸನ್, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
*ಸಂಪಾದಕರು*
*ತಿರುಮಲೆ ತಿರುಪತಿ ದೇವಸ್ಥಾನಗಳು,*
*ತಿರುಪತಿ.*

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥*

**ವೇಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥**

# ನಿಮ್ಮೊಡನೆ ಎರಡು ಮಾತು......



ಭಗವಂತ ಎಲ್ಲಿದ್ದಾನೆ ಎಂದರೆ ಭಕ್ತನ ಹೃದಯದಲ್ಲಿ. ಯಾರು ನಿರ್ಮಲವಾದ ಭಕ್ತಿಯಿಂದ ಓಲೈಸುವರೋ, ಯಾರು ಅಹಂಕಾರವನ್ನು ಬಿಟ್ಟು, ನೀನಲ್ಲದೆ ಬೇರೆ ದಿಕ್ಕಿಲ್ಲ ಎಂದು ಆರ್ತಿಯಿಂದ ಕರೆಯುವರೋ, ಅವರೊಡನೆಯೇ ಇರುತ್ತಾನೆ ಆ ಆಪದ್ಬಾಂಧವ. ಎಂತಲೇ ಭಗವಂತನ ಸೇವೆಗಿಂತಲೂ ಭಾಗವತಸೇವೆಯೇ ದೊಡ್ಡದು ಎಂದರು ಹಿರಿಯರು. ತನ್ನ ಭಕ್ತರನ್ನು ಸೇವಿಸುವವರ ಬಗ್ಗೆ ಭಗವಂತನಿಗೆ ಮತ್ತಷ್ಟು ಸ್ನೇಹ, ಕರುಣೆ, ಸಹಾನುಭೂತಿ.

ದೂರ ತೀರಗಳಿಂದ ಕೋರಿಕೆಗಳು ನೆರವೇರುತ್ತವೆ ಎಂಬ ಬೆಟ್ಟದಷ್ಟು ಆಸೆ ಹೊತ್ತು ಪ್ರಯಾಸಗಳಿಂದ ನಿತ್ಯವೂ ಸಾವಿರಾರು ಮಂದಿ ಭಕ್ತರು ಆಶ್ರಯಧಾಮನ ಅತಿಸಮೀಪ ದರ್ಶನಕ್ಕಾಗಿ ತಿರುಮಲೆಗೆ ಬರುತ್ತಿದ್ದಾರೆ. ಹಾಗೆ ಬರುವಂತಹ ಭಕ್ತರಿಗೆ ಆಯಾಸವಾಗದಂತೆ ಎಲ್ಲ ವಿಧಗಳಲ್ಲಿ ಸೇವೆ ನಡೆಸಬೇಕೆಂಬುದೇ ತಿರುಮಲ - ತಿರುಪತಿ ದೇವಸ್ಥಾನಗಳ ಆಶಯ.

ಈ ಪ್ರಯತ್ನದಲ್ಲಿ ದೇವಸ್ಥಾನದ ಯಾಜಮಾನ್ಯ, ಉದ್ಯೋಗಿಗಳು ಅಕುಂಠಿತವಾಗಿ ಶ್ರಮಿಸುತ್ತಿದ್ದಾರೆ. ಅನುಕ್ಷಣವೂ ತಾವು ಭಕ್ತರಿಗೆ ಮಾಡುತ್ತಿರುವ ಸೇವೆಗಳು ಮತ್ತಷ್ಟು ಘನವಾಗಿರಬೇಕೆಂಬ ಪ್ರಯತ್ನ ಅವರದು. ಆಧುನಿಕ ಸಾಂಕೇತಿಕ ತಾಂತ್ರಿಕ ಪರಿಜ್ಞಾನವೆಲ್ಲವನ್ನೂ ಬಳಸಿ ಬರುವಂತಹ ಪ್ರತಿಭಕ್ತರಿಗೂ ವಸತಿ, ದರ್ಶನಗಳನ್ನು ಕಲ್ಪಿಸಲು ಪ್ರಯತ್ನಿಸಲಾಗುತ್ತಿದೆ.

ದಿನ ದಿನಕ್ಕೂ ಭಕ್ತರ ಸಂಖ್ಯೆ ಹೆಚ್ಚುತ್ತಲೇ ಇದೆ. ಅದಕ್ಕೆ ತಕ್ಕಂತೆ ದೇವಸ್ಥಾನಗಳೂ ಸಹ ಅವರ ಸೌಕರ್ಯಗಳ ವಿಷಯದಲ್ಲಿ ತನ್ನ ಪ್ರಯತ್ನಗಳನ್ನು ಹೆಚ್ಚಿಸಿಕೊಳ್ಳುತ್ತಿದೆ. ಹಿಂದಿನ ದಿನಗಳನ್ನು ನೆನೆಸಿಕೊಂಡರೆ ಈಗ ತಿರುಮಲೆಯ ಯಾತ್ರೆ ಮಾಡ ಬಯಸುವ ಭಕ್ತರಿಗೆ ಎಷ್ಟೋ ಸೌಕರ್ಯಗಳು ಹೆಚ್ಚಿಗೆ ದೊರೆಯುತ್ತಿವೆಯೆಂಬ ಮಾತು ನಿಜವೇ. ತಿರುಮಲೆಯಲ್ಲಿ, ತಿರುಪತಿಯಲ್ಲಿ ವಸತಿಗೃಹಗಳ ಸಂಖ್ಯೆ ಹೆಚ್ಚಿದೆ. ತಿರುಪತಿಯಲ್ಲಿಯೇ ಶ್ರೀನಿವಾಸಂ ಹೆಸರಿನ ಅತಿ ಹೆಚ್ಚು ಕೊಠಡಿಗಳ ವಸತಿಗೃಹ ನಿರ್ಮಾಣ ನಡೆಯುತ್ತಿದೆ. ಸುದರ್ಶನ ಟೋಕನ್ ನೆರವಿನಿಂದ ಭಕ್ತರಿಗೆ ಸ್ವಾಮಿಯ ದರ್ಶನದ ಸಮಯ ಮೊದಲೇ ತಿಳಿಯುತ್ತಿದೆ. ಅಷ್ಟೇ ಅಲ್ಲ; ಭಕ್ತರು ತಮ್ಮ ವಸತಿಯನ್ನು ಸ್ವಾಮಿಯ ಆರ್ಜಿತ ಸೇವೆಗಳನ್ನು ಮೊದಲಿಗೇ ರಿಸರ್ವ್ ಮಾಡಿಕೊಳ್ಳುವ, ಅವಕಾಶವಿದೆ. ದೇಶದ ಎಲ್ಲ ಭಾಗಗಳಿಂದಲೂ ಆನ್‌ಲೈನ್ ಮೂಲಕ ಈ ಸೌಲಭ್ಯವನ್ನು ಪಡೆಯುವ ಪ್ರಕ್ರಿಯೆ ಒಂದು ರೂಪವನ್ನು ಪಡೆಯುತ್ತಿದೆ.

ಇಂದು ತಿರುಮಲೆಯಲ್ಲಿ ಎಲ್ಲಿ ನೋಡಿದರೂ ಹಸಿರು ನಲಿಯುವಂತೆ ಕಾಣುತ್ತಿದೆ. ತಿರುಮಲೆಯ ಪರ್ವತ ಪ್ರದೇಶವನ್ನೆಲ್ಲ ಪರಿಶುಭ್ರವಾಗಿ, ಹಸಿರಿನಿಂದ ಕೂಡಿರುವಂತೆ ಮಾಡಲು ದೇವಸ್ಥಾನಗಳು ತತ್ಪರವಾಗಿ ಕೆಲಸಮಾಡುತ್ತಿದೆ. ಇದೇ ರೀತಿಯಲ್ಲಿ ಕಲ್ಯಾಣಕಟ್ಟೆ ನಿತ್ಯಾನ್ನದಾನ ಕಾಂಪ್ಲೆಕ್ಸ್, ಮೊದಲಾದವನ್ನು ಪರಿಶುಭ್ರವಾಗಿಟ್ಟುಕೊಳ್ಳಲು ಪ್ರಯತ್ನಗಳು ನಡೆದಿವೆ.

ದೇವಸ್ಥಾನದಲ್ಲಿ ಕೆಲಸ ಮಾಡುತ್ತಿರುವವರು ಕೇವಲ ಉದ್ಯೋಗಿಗಳು ಮಾತ್ರವೇ ಅಲ್ಲ; ಅವರೆಲ್ಲ ಸ್ವಾಮಿಯ ಭಕ್ತರ ಸೇವಕರು ಎಂಬ ಭಾವನೆ ಎಲ್ಲ ಸಿಬ್ಬಂದಿಯಲ್ಲಿ ಉಂಟಾಗುವಂತೆ ಮಾಡಲು ಅವರಿಗೆಲ್ಲ ಪ್ರತ್ಯೇಕವಾದ ಶಿಕ್ಷಣವನ್ನು ನೀಡಲಾಗುತ್ತಿದೆ. 'ಶ್ರೀವಾರಿಸೇವೆ' ಮಾಡಲು ಮುಂದೆ ಬರುವವರಿಗೆ ಸಹ ಪ್ರತ್ಯೇಕ ಪ್ರೋತ್ಸಾಹ ನೀಡಲಾಗುತ್ತಿದೆ.

ತಿರುಮಲೆಗೆ ಬರುವ ಎಲ್ಲರಿಗೂ ಆ ದೇವದೇವನ ದರ್ಶನ ಅತ್ಯಂತ ಸುಲಭವಾಗಿ ಸುಖವಾಗಿ ಆಗಬೇಕು ಎಂಬುದು ದೇವಸ್ಥಾನದ ಆಶಯ. ಅದಕ್ಕಾಗಿಯೇ ನಿರಂತರವಾದ ಎಲ್ಲರೀತಿಯ ಪ್ರಯತ್ನ. ಭಾರೀ ಸಂಖ್ಯೆಯಲ್ಲಿ ಭಕ್ತರು ಬರುತ್ತಿರುವಾಗ ಎಲ್ಲೋ, ಯಾವಾಗಲೋ ಒಂದು ಕಡೆ ಯಾವುದೋ ಒಂದು ಚಿಕ್ಕ ಲೋಪವುಂಟಾಗಬಹುದು. ಅಂತಹ ಲೋಪಗಳನ್ನು ಕೂಡಲೇ ಅಧಿಕಾರಿಗಳ ದೃಷ್ಟಿಗೆ ತಂದುಕೊಟ್ಟರೆ, ಅವುಗಳನ್ನು ನೇರ್ಪಡಿಸಲು ಪ್ರಯತ್ನಿಸುತ್ತೇವೆ. ಸ್ವಲ್ಪ ಸಹನೆಯಿಂದ ಭಕ್ತರು ಸಹಕಾರವನ್ನು ತೋರಿದರೆ ತಿರುಮಲೆಯ ಯಾತ್ರೆ ಎಲ್ಲರಿಗೂ ಒಂದು ಮಧುರಾನುಭೂತಿಯಾಗುತ್ತದೆ.

ಭಕ್ತರ ಸೇವೆಗೆ ಅಂಕಿತವಾಗುತ್ತ.....................

**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಪ್ರಾತಃ ಸ್ಮರಣೀಯ ಶ್ರೀಪಾದರಾಜರು

-ಡಾ|| ಎನ್. ಕೆ. ರಾಮಶೇಷನ್.

ಬೆಳಗು ಜಾವದೊಳೆದ್ದು ಭರದ್ವಾಜ ಮುಂತಾದ ಹಕ್ಕಿಗಳ ಕಲರವ ಆಲಿಸುವುದರ ಸಂಗಡ, ಮೂಡಣ ದಿಸೆ ಕಿತ್ತಳೆರಂಗೇರಿ, ಉಷಸ್ಸು ಇಳೆಗೆ ಕವಿದ ಕತ್ತಲೆಯನ್ನು ತೊಳೆಯುತ್ತಿದ್ದಂತೆ, ಸ್ಮರಿಸಬೇಕಾದ ಸಪ್ತಾದ್ರಿವಾಸನ - ಶ್ರೀಹರಿಯ - ಲಕುಮಿಧವನ ಜೊತೆಗೇ ನೆನಪು ಬರುವಂತಹದ್ದು ಶ್ರೀಪಾದರಾಜರದ್ದು. ಹೀಗಾದಲ್ಲಿ ಅದು ಸೊಗಸಿನ ದಿನವಾದೀತು. ಇದಕ್ಕೆ ಕಾರಣವೂ ಇದೆ -

ಕನ್ನಡ ಸಾಹಿತ್ಯೇತಿಹಾಸದಲ್ಲಿ ಮೂಡಿ ಬಂದ ಪ್ರಮುಖ ಸಾಹಿತ್ಯ ಪ್ರಾಕಾರಗಳಲ್ಲಿ ಎದ್ದು ಕಾಣುವುವು ಕ್ರಿ.ಶ. 12 ನೇ ಶತಮಾನದ ವಚನಕಾರರ ಶಿವಭಕ್ತಿ ಪಾರಮ್ಯ ಪ್ರತಿಪಾದಕ ಚಳುವಳಿ ಹಾಗೂ 14-15 ಶತಮಾನದಲ್ಲಿ ಆರಂಭವಾಗಿ ಸೌಮ್ಯಸ್ವಭಾವದ, ತನ್ನದೇ ಆದ ವಿಶಿಷ್ಟರೀತಿಯಲ್ಲಿ ಸಮಾಜ ಸಮಷ್ಟಿಸ್ವಾಸ್ಥ್ಯಕ್ಕಾಗಿ ಶ್ರಮಿಸಿದ ಹಾಗೂ ಬೆಳೆದು ಬಂದ ಹರಿದಾಸ ಚಳುವಳಿ. ಶ್ರೀಪಾದರಾಜರು ಹರಿದಾಸ ಸಾಹಿತ್ಯದ ಮೊದಲ ಪ್ರತಿಪಾದಕರು. ಹರಿಭಕ್ತಿ ವಾಹಿನಿಯು ತಮಿಳುನಾಡಿನ ವೈಷ್ಣವ ಸಂತರಾದ ಆಳ್ವಾರರ ಮೂಲಕ ''ಆರಾವಮುದೇ....'' (ಆರದ ಅಮೃತ) ಆಗಿ ಹರಿದರೂ, ಕನ್ನಡ ನಾಡಿನ ಉಡುಪಿಯ ಮಧ್ವಾಚಾರ್ಯರ ದ್ವಾದಶಸ್ತೋತ್ರದ ಭಕ್ತಿಕವಿತೆಯಲ್ಲಿ ಅವರ ಶಿಷ್ಯ ನರಹರಿತೀರ್ಥರ ನಾಲ್ಕು ಕೃತಿಗಳ ಮೂಲಕ ಕೊನರಿದರೂ, ದಾಸಸಾಹಿತ್ಯ ಸಂಪದದ ಸಂಪೂರ್ಣ ಸ್ವರೂಪ ಕಾಣುವುದೇ ಶ್ರೀಪಾದರಾಜರ ಕೃತಿಗಳಲ್ಲಿ ಎಂದರೆ ತಪ್ಪಾಗದು.

ನಮಃ ಶ್ರೀಪಾದರಾಜಾಯ
ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ
ವಿಜಯಾರ್ಯಾಯ ತೇ ನಮಃ

- ಎಂಬುದರಲ್ಲಿ ಮೊದಲ ಹೆಸರು ಶ್ರೀಪಾದರಾಜರದು. ಹರಿದಾಸ ಸಾಹಿತ್ಯದ ಎರಡು ಮುಖಗಳಾದ ವ್ಯಾಸಕೂಟ - ಪಂಡಿತ ಮಾನ್ಯಗೋಷ್ಠಿ - ಮಠಾಧೀಶರು, ಪಂಡಿತ ಪ್ರಿಯವಿದ್ದಂತೆ, ಸುಧಾ ಓದಿ ಪದಹೇಳು - ಎಂಬುವ ದಾಸರ ಕೃತಿ - ದಾಸಕೂಟಗಳಲ್ಲಿ ಮಠಾದೀಶರೂ ಪಾಲ್ಗೊಂಡಿದ್ದು ವಿಶೇಷ. ಕನ್ನಡ ದೇಸಿಯೂ ಬೆಳೆಯಿತು. ಮುಳಬಾಗಿಲಿನ ಶ್ರೀಪಾದರಾಜರು ರಂಗವಿಠಲ ಅಂಕಿತದಲ್ಲಿ ನೂರಾರು ಕೀರ್ತನೆ ಹಾಡಿದಂತೆ, ಅವರ ಪ್ರಿಯ ಶಿಷ್ಯರಾದ ವ್ಯಾಸರಾಯರು ಕೃಷ್ಣ, ಸಿರಿಕೃಷ್ಣ, ಶ್ರೀಕೃಷ್ಣ - ಅಂಕಿತದಲ್ಲಿ ಅನೇಕ ಕೃತಿ ರಚಿಸಿದರು. ಇದೇ ತೆರನಾಗಿ ಸೋದೆಯ ವಾದಿರಾಜರು, ಅನಂತರದಲ್ಲಿ ಮೂಡಿಬಂದ ಮಂತ್ರಾಲಯದ ರಾಘವೇಂದ್ರಸ್ವಾಮಿಗಳು, ವ್ಯಾಸ ತತ್ವಜ್ಞರು - ಹೀಗೆ ಅನೇಕ ಮಠಾಧೀಶರೂ ದಾಸಸಾಹಿತ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ. ಹರಿದಾಸರ





ಬಗ್ಗೆಯಂತೂ ಹೇಳುವಂತೆಯೇ ಇಲ್ಲ. ಅವರು ಸದಾ (ದಾಸ ಪದವನ್ನು ತಿರುಗಿಸಿ ಹೇಳಿದರೆ) ಹರಿಯಲ್ಲಿ ಮನ ನಟ್ಟವರೇ. ಸಾಲದೆಂದೆನಬೇಡ, ಸಾಲ ಮಾಡಲಿಬೇಡ ಎನ್ನುವವರೇ. ದಾಸಸಾಹಿತ್ಯ ನೀಡಿದ ಕೊಡುಗೆ ಅನೇಕ. ಕನ್ನಡ ನುಡಿ ಬಳಕೆ - ತಿಳಿಗನ್ನಡ ನುಡಿಗಟ್ಟಿನಲ್ಲಿ ಗಹನ ದ್ವೈತ ತತ್ವವನ್ನು ತಿಳಿಸಿದ್ದು, (ಇದೇ ರೀತಿ ಶ್ರೀವೈಷ್ಣವ ಹರಿದಾಸ ಪರಂಪರೆಯೂ ಬಂದಿದೆ) ಸಾಮಾನ್ಯರೂ ಈ ಭಕ್ತಿಯ ಆಂದೋಲನದಲ್ಲಿ ತಮ್ಮನ್ನು ತಾವು ಸರ್ವಥಾ ಸ್ವಾಸ್ಥ್ಯದಿಂದಿರಬೇಕೆಂಬ ಅವರ ಕಳಕಳಿ, ಹರಿಭಕ್ತಿ ಪ್ರಸಾರ, ಹರಿಸರ್ವೋತ್ತಮತ್ವ ಪ್ರತಿಪಾದನೆ - ಒಂದೇ - ಎರಡೇ!! ಸಾಹಿತ್ಯದ ಒಂದು ಪ್ರಧಾನ ಲಕ್ಷ್ಯ ಸಮಾಜದ ಶುದ್ಧೀಕರಣ ಅದನ್ನು ದಾಸಸಾಹಿತ್ಯ ಮನಗಂಡು ಅದರ ಸಾಧನೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿತು. ಅಂತಹ ದಾಸಸಾಹಿತ್ಯದ ಆದ್ಯರು ಶ್ರೀಪಾದರಾಜರು.

ಶ್ರೀಪಾದರಾಜರು ಮೂಲತಃ ತಮಿಳುನಾಡಿನ ಶ್ರೀರಂಗದ ಸ್ವರ್ಣವರ್ಣ ತೀರ್ಥರ ಶಿಷ್ಯರು. ಹುಟ್ಟಿದ್ದು ಕ್ರಿ.ಶ. 1404 ರಲ್ಲಿ ಚೆನ್ನಪಟ್ಟಣದ ಸಮೀಪದ ಅಬ್ಬೂರಿನಲ್ಲಿ . ಸನ್ಯಾಸ ಪಡೆದು ಬೆಳೆದದ್ದು ಶ್ರೀರಂಗದಲ್ಲಿ. ಅನಂತರ ಪರ್ಯಟನೆಗಾಗಿ ಬಂದವರು ಮುಳಬಾಗಿಲಿನ ಬಳಿ ನರಸಿಂಹ ತೀರ್ಥದ ಪರಿಸರದಲ್ಲಿನ ಪ್ರಶಾಂತಿಯನ್ನು ಕಂಡು, ಇಲ್ಲೇ ನಿಂತರು. ಅವರ ಸಮರ್ಥ ನೇತೃತ್ವದಲ್ಲಿ ದ್ವೈತಸಿದ್ಧಾಂತ ಶಿಕ್ಷಣ ಕೇಂದ್ರವೇ ಇಲ್ಲಿ ಆರಂಭವಾಯಿತು. ವ್ಯಾಸಕೂಟ ದಾಸಕೂಟ ಗಳೆರಡಕ್ಕೂ ಶ್ರೀಪಾದರಾಯರು ವ್ಯಾಸರಾಯರ ಮೂಲಕ ಅಂಕುರಾರ್ಪಣೆ ಮಾಡಿದರು.

ತಮ್ಮ ಗುರುಗಳ ವ್ಯಕ್ತಿತ್ವವನ್ನು ಹಾಗೂ ಅವರ ವೃಂದಾವನ ಸೇವಿಸುವವರಿಗೆ ದೊರೆಯುವ ಪುಣ್ಯಫಲವನ್ನು ವ್ಯಾಸರಾಯರು ತಮ್ಮ ಪಂಚರತ್ನ ಮಾಲಿಕೆಯಲ್ಲಿ ಹಾಡಿದ್ದಾರೆ-

ಯದ್ವೃಂದಾವನ ಸೇವಯಾ ಸುವಿಮಲಾಂ
ವಿದ್ವಾನ್ ಪಶೂನ್ ಸಂತತಂ
ಧ್ಯಾನಜ್ಞಾನ ಮನಲ್ಪ ಕೀರ್ತಿನಿವಹಂ
ಪ್ರಾಪ್ನೋತಿ ಸೌಖ್ಯಂ ಜನಃ
ತಂ ವಂದೇ ನರಸಿಂಹ ತೀರ್ಥ ನಿಲಯಂ
ಶ್ರೀ ವ್ಯಾಸರಾಜ ಪೂಜಿತಂ
ಧ್ಯಾಯಂತಂ ಮನಸಾ ನೃಸಿಂಹ ಚರಣಂ
ಶ್ರೀಪಾದರಾಜಂ ಗುರುಮ್

-ಯಾರು ಶ್ರೀಪಾದರಾಜರ ವೃಂದಾವನ ವನ್ನು ಭಕ್ತಿಯಿಂದ ಸೇವಿಸುವರೋ ಅವರ ಎಲ್ಲ ಅಭೀಷ್ಟಗಳೂ ಈಡೇರುವುದೆಂಬುದಾಗಿ ಭರವಸೆ ನೀಡುತ್ತಾರೆ.

ಸಕಲ ಶಾಸ್ತ್ರ ಕಲಾಪ ಸಂನ್ಯಾಸ ಕುಲದೀಪ
ಸಕಲ ಸತ್ಯಸ್ಥಾಪ ಸುಜ್ಞಾನ ದೀಪ
ಪ್ರಕಟಪಾವನ ರೂಪ ಕುಜನ ಮತ ಲೋಪ
ನಿತ್ಯವರ್ಜಿತಪಾಪ ಕೀರ್ತಿ ಪ್ರತಾಪ

- ಎಂದು ಹಾಡುವ ವ್ಯಾಸರಾಯರು ಸಕಲ ಶಾಸ್ತ್ರ ಸಂಪನ್ನರೂ ಶರಣಕೀರ್ತಿ ತರಂಗರೂ ಷಟ್ಶಾಸ್ತ್ರ ಸಂಗರೂ ಆಗಿದ್ದವರು ತಮ್ಮ ಗುರುಗಳೆಂದು ಘೋಷಿಸುತ್ತಾರೆ. ಶರಣ ಜನಸುರಧೇನುವಾಗಿದ್ದ ಶ್ರೀಪಾದರಾಜರು ಸಿದ್ಧ ಪುರುಷರು. ಸಕಲ ಶಾಸ್ತ್ರ ಕಲಾಪರೂ, ವಾದಿ ಭಯಂಕರರೂ ಆಗಿದ್ದವರು. ತೊಂಭತ್ತೆಂಟು ವರುಷದ ದೀರ್ಘಕಾಲವನ್ನು ಹರಿಸೇವೆಗೆಂದೇ ಮೀಸಲಿರಿಸಿ ಬದುಕಿದವರು. ಅವರು ವೃಂದಾವನಸ್ಥರಾಗಿದ್ದು ಕ್ರಿ.ಶ. 1502 ರಲ್ಲಿ (ಜ್ಯೇಷ್ಠ ಶುದ್ಧ ಚತುರ್ದಶಿ).

ಶ್ರೀಪಾದರಾಯರು ತಮ್ಮ ಬದುಕಿನಲ್ಲಿ ನಡೆಸಿದ ಹಲವು ಕಾರ್ಯಗಳನ್ನು ನೆನಪು ಮಾಡಿಕೊಳ್ಳುವುದು ಸೂಕ್ತ ಆದೀತು.

ತಮಿಳು ನಾಡಿನ ಶ್ರೀರಂಗ ಪ್ರಸಿದ್ಧ ಶ್ರೀವೈಷ್ಣವ ದೇಶ. ಅಲ್ಲಿ ಶ್ರೀರಂಗನಾಥಸ್ವಾಮಿಯ ದೇವಾಲಯದಲ್ಲಿ ಪ್ರತಿನಿತ್ಯ ದೇವತಾರ್ಚನೆಯ ಸಂದರ್ಭದಲ್ಲಿ ವಿವಿಧ ತಿರುನಾಳುಗಳಲ್ಲಿ (ತಿರುನಾಳ್ - ಶ್ರೇಷ್ಠದಿವಸ - ಪರ್ವದಿನ - ಉತ್ಸವ ದಿನ) ಸೇರುತ್ತಿದ್ದ ದಿವ್ಯಪ್ರಬಂಧಗೋಷ್ಠಿ ಹಾಡುತ್ತಿದ್ದ ಆಳ್ವಾರರ ಭಕ್ತಿಗೀತೆಗಳನ್ನು ಆಲಿಸಿದ ಶ್ರೀಪಾದರಾಯರಿಗೆ, ತಾವು ದೇವರಿಗೆ ನಡೆಸುವ ಪೂಜಾ ಸಂದರ್ಭದಲ್ಲಿ ಕನ್ನಡದಲ್ಲಿ ದೇವರನಾಮಗಳನ್ನು ಹಾಡಿ ದೇವರ ಕೈಂಕರ್ಯ ಮಾಡಬಾರದೇಕೆ - ಸಂಗೀತಮವಧಾರಯಾ ಎಂದರೆ ಇದಾಗದೇ? ಎನ್ನಿಸಿತು. ಅದೇ ಅವರ ಹಲವು ಸುಂದರ ಕೀರ್ತನೆಗಳ ರಚನೆಗೆ ಕಾರಣವಾಯಿತು.

ಶ್ರೀಪಾದರಾಯರ ಪ್ರಿಯ ಶಿಷ್ಯರಾಗಿದ್ದ ವ್ಯಾಸರಾಯರು ಸಾಮಾನ್ಯರಲ್ಲ. ಆಳವಾದ ಪಾಂಡಿತ್ಯವಿದ್ದವರು. ಅವರ ನ್ಯಾಯಾಮೃತ, ತರ್ಕ ತಾಂಡವ, ಚಂದ್ರಿಕಾ - ಇವು ಮೂರು ಮಧ್ವ ಕಂಠೀರವನ ಮೂರು ನೇತ್ರಗಳಿದ್ದಂತೆ.

ವ್ಯಾಸರಾಯರು ಶ್ರೀಪಾದರಾಜರಲ್ಲಿ ಹೆಚ್ಚಿನ ಅಧ್ಯಯನ ನಡೆಸಿದರು. ಗುರು ಶಿಷ್ಯರ ಪ್ರೀತಿಯ ಬಾಂಧವ್ಯ ಅಸದಳವಾಗಿತ್ತೆಂದರೆ ಶ್ರೀಪಾದ ರಾಯರ ಪಾಂಡಿತ್ಯ ಹೇಗಿದ್ದೀತು! ಆದರೆ ಇಬ್ಬರೂ ತಮ್ಮ ಕೀರ್ತನೆಗಳಲ್ಲಿ ಈ ಬಗ್ಗೆ ವಿವರ ನೀಡಿಲ್ಲ. ಆದರೆ ಕೀರ್ತನೆಗಳು ತಿಳಿಗನ್ನಡದಲ್ಲಿದ್ದು ಎಲ್ಲರನ್ನೂ ಭಕ್ತಿಯ ಸಾಧನೆಯತ್ತ ಕರೆದೊಯ್ಯುತ್ತವೆ. ಹಾಗಾಗಿ ಕನ್ನಡ ಭಾಷೆಗೆ ಇವರ ಕಾಣಿಕೆ ಚಿರಂತನವಾದದ್ದು.

ಶ್ರೀಪಾದರಾಯರು ದಾಸಕೂಟದ ಕಲ್ಪನೆಯನ್ನು ವ್ಯಾಸರಾಯರಿಗೆ ನೀಡಿ ಬೆಳೆಸಿದರು. ಆ ಮೂಲಕವಾಗಿ ಅದು ಹರಡಲು ಅನುವು ಮಾಡಿಕೊಟ್ಟರು.

ತಾವು ನಂಬಿದ ಮಧ್ವಮತ ತತ್ವವನ್ನು ವಿನಮ್ರವಾಗಿ, ಪ್ರಬಲವಾಗಿ ಪ್ರಸಾರ ಮಾಡುವಲ್ಲಿ ಪ್ರಯತ್ನಪಟ್ಟರು.

-ಇವು ಶ್ರೀಪಾದರಾಯರ ಗುಣ ವಿಶೇಷಣಗಳಾಗುತ್ತವೆ.

ಇನ್ನೂ ಕೀರ್ತನೆಗಳೋ? ಅಲ್ಲಿ ಕೀರ್ತನೆಗಳಷ್ಟೇ ಅಲ್ಲ. ವಿಶೇಷ ರಚನೆಗಳಾದ ಸುಳಾದಿ, ಉಗಾಭೋಗ, ದಂಡಕ, ಭ್ರಮರಗೀತ, ವೇಣುಗೀತ, ನವವಿಧ ಭಕ್ತಿ, ಮಧುರಭಾವ, ವಾತ್ಸಲ್ಯಭಾವ, ವೃತ್ತನಾಮ, (ಶ್ಲೋಕ, ಪದ, ಹಾಡುಗಳುಳ್ಳ ವಿಶೇಷ ಪ್ರಕಾರ) ತತ್ವ ಪ್ರತಿಪಾದನೆ, ರುಕ್ಮಿಣಿ ಸತ್ಯಭಾಮೆಯರ



ರಕ್ಷಿಸು ನೀ ಎನ್ನ ರಂಗವಿಠಲ.

ಸಂವಾದಕಥನ ಗೀತ, ಆತ್ಮಶೋಧನೆ, ತನ್ಮೂಲಕ ತಾನು ಕಂಡು ಕೊಂಡದ್ದನ್ನು ತಿಳಿಸುವ ಸಂದೇಶ, - ಹೀಗೆ ವಿವಿಧ ಗಳನ್ನು ಒಳಗೊಂಡ ರಚನೆಗಳು. ಇದರ ಜೊತೆಗೇ ಶ್ರೀಪಾದರಾಜರು ಒಂದು ಭಜನ ಮಂಡಳಿಯನ್ನೂ ಸಂಘಟಿಸಿ, ತಾವೇ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತ ಭಗವಂತನನ್ನು ಸ್ತುತಿಸುತ್ತಿದ್ದರಂತೆ. ಅದರ ಅಂತರಂಗದ ಭಕ್ತಿ ಎಲ್ಲ ಕೃತಿಗಳಲ್ಲಿಯೂ ಹಾಸುಹೊಕ್ಕಾಗಿದೆ. ಶ್ರೀಪಾದರಾಜರು ಒಬ್ಬ ಭಕ್ತರಾಗಿ, ಶ್ರೀಹರಿಯ ದಾಸರಾಗಿ ಕೇಳಿಕೊಳ್ಳುವುದಿಷ್ಟೆ -

ರಾಗ ಭೋಗಗಳೆನಗೆಂದು
ಈಗ ನಾನು ಬೇಡಬಂದುದಿಲ್ಲ
ನಾಗ ಶಯನ ರಂಗವಿಠಲ ನಾ ನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ
ಇದನಾದರೂ ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವುದೆಂತೊ!

ಅವರ ಬೇಡಿಕೆ ಬಹಳ ಸರಳ - 'ನಾ ನಿನಗೇನು ಬೇಡುವುದಿಲ್ಲ, ಎನ್ನ ಹೃದಯ ಕಮಲ ದೊಳು ನೆಲೆಸಿರು ಹರಿಯೇ', ಆಗಾಗ 'ನೀನೆ ಒಲ್ಲಿದ್ದನೊ ನಿನ್ನ ಭಕುತರು ಒಲ್ಲಿದರೋ' ಎಂದು ಕೇಳುವುದುಂಟು.

ಅನಂತ ಕಾಲದಲ್ಲಿ ನಿನ್ನ ನಾನರಿಯದೆ
ಭವಗಳಲ್ಲಿ ಬಂದೆನೋ
ಅನಂತಕಾಲದಲ್ಲಿ ನಿನ್ನ ನೆನೆಸದೆ
ಮೂರುಖನಾದೆನೋ
ಅನಂತ ಕಾಲದಲ್ಲಿ ನಿನ್ನ
ಚರಣ ರತಿಯಿಲ್ಲದೆ ನೊಂದೆನೋ
...... ಎನ್ನ ಪ್ರೇಮ
ಪಾಲಿಸೋ ದೀನಭಂಧ ಶ್ರೀರಂಗವಿಠಲ

- ಈ ಪದ್ಯದಲ್ಲಿನ 'ಚರಣರತಿ' - ಪದಪ್ರಯೋಗ ಧ್ವನ್ಯಾತ್ಮಕವಾಗಿ ಮಧುರಭಾವದ ಉದಾಹರಣೆ ಆಗಿ ಕಂಡುಬರುವುದು. ಇದೇ ರೀತಿಯಲ್ಲಿ ವಿನಮ್ರತೆ, ಭಕ್ತಿ ಭಾವಗಳನ್ನು ಅವರ ಹಲವಾರು ರಚನೆಗಳಲ್ಲಿ ಏಕಾಂಡಲವಾಗಿರುವುದನ್ನು ಕಾಣಬಹುದಾಗಿದೆ.

ಇಟ್ಟಾಂಗೆ ಇರುವೆನೋ ಹರಿಯೇ
ಎನ್ನಧೊರಿಯೇ ॥ ಪ ॥
ಸೃಷ್ಟಿವಂದಿತ ಪಾದ ಪದುಮ ಶ್ರೀಹರಿಯೇ ॥ ಅ.ಪ. ॥

ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ
ಘನ್ನ ಮಹಿಮ ನಿನ್ನ ಕರುಣೆ ತಪ್ಪಿದ ಬಳಿಕ ಕ
ದನ್ನ ಕಾಣದೆ ಬಾಯ್ಬಿಡಿಸುವೆ ಹರಿಯೆ॥1॥

- ಎಂದು ನಿನ್ನ ಕೃಪೆಯು ತಪ್ಪಿದ ಬಳಿಕ ಕಪರ್ದಿಕ ಕೌಪೀನವು ದೊರೆಯದು ಹರಿಯೇ ಎಂಬ ಸತ್ಯದ ಮಾತನ್ನೇ ನುಡಿಯುತ್ತಾರೆ.

ಹೀಗೆಯೇ ಶ್ರೀಪಾದರಾಜರ "ಇಕ್ಕೊ ನೋಡೆ ರಂಗನಾಥನ ಚಿಕ್ಕ ಪಾದವ", 'ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ', 'ಜೋಜೋ ಜೋಜೋ ಜೋಜೋ ರಂಗಧಾಮ' 'ಭೂಷಣಕ್ಕೆ ಭೂಷಣ ಇದು ಭೂಷಣ', 'ಪೋಪು ಹೋಗೋಣ ಬಾರೋ ರಂಗ', 'ಬಾರೋ ಮನೆಗ ಗೋವಿಂದ ನಿನ್ನಂಘ್ರಿ ಕಮಲವ ತೋರೋ ಎನಗೆ ಮುಕುಂದ', 'ಬಿಡಿ ಬಿಡಿ ಸಂದೇಹವನು ಒಡೆಯನೊಬ್ಬನೆ ಜಗಕೆ ರಂಗವಿಠಲ', (ಹರಿಸರ್ವೋತ್ತಮತ್ವ) 'ರಕ್ಷಮಾಂ ರಂಗೇಶ', 'ರಂಗ ಕೊಳಲನೂದುತ ಬಂದ ಯಶೋದೆಯ ಕಂದ' - ಮೊದಲಾದ ರಚನೆಗಳು ಹಾಡಿಕೊಳ್ಳಲು ಸೊಗಸಾಗಿವೆ. ಚಿಂತಿಸಲು ಮನನ ಮಾಡಲು ಅರ್ಥಗರ್ಭಿತವಾಗಿವೆ.

ಶ್ರೀ ಪಾದರಾಜರ ಮಧ್ವನಿಷ್ಠೆ ಅವರ ನೀಳ್ಗವಿತೆ - 27 ನುಡಿಗಳ ಕೀರ್ತನೆ ಆಗಿದೆ -

ಜಯ ಜಯ ಜಗತ್ರಾಣ
ಜಗದೊಳಗೆ ಸುತ್ರಾಣ
ಅಖಿಲ ಗುಣ ಸದ್ಧಾಮ ಮಧ್ವನಾಮ

-ತಾವು ನಂಬಿದ ಮಧ್ವಮತ ಪ್ರಸಾರದ ಚಿಂತೆಯಿಂದಾಗಿ ವೀರ ವೈಷ್ಣವನಾಗಿಯೂ ಹಾಡುವ ಕಲಿತನ ತೋರುತ್ತಿದೆ; ವಿಶೇಷವೆಂದರೆ ಈ ಕೃತಿಗೆ ಮೂರು ಶತಮಾನಗಳ ನಂತರ 18 ನೇ ಶತಮಾನದಲ್ಲಿ ಅವತರಿಸಿ ಬಂದ ಜಗನ್ನಾಥದಾಸರು ಫಲಶ್ರುತಿ ಬರೆದಿದ್ದಾರೆ.

ಶ್ರೀಪಾದರಾಯರು ಬರೆದ ಮಧ್ವನಾಮ
ಸಂತಾಪ ಕಳೆದಖಿಲ ಸೌಖ್ಯವ ನೀವುದು

- ಈ ಮಾತುಗಳನ್ನು ಮತ್ತೆ ಮತ್ತೆ ಸವಿಯಬೇಕೆನ್ನಿಸುವುದು. ಪೂಜೆ, ಅರ್ಚನೆ, ದೇವತಾರಾಧನೆಗಳಂತೆ ಅತ್ಯುನ್ನತ ಮಟ್ಟದ ಪೂಜಾ ವಿಧಾನವೆಂದರೆ ಮಾನಸ ಪೂಜಾ ವಿಧಾನ.

ಕನಕ ರತ್ನಗಳನ್ನು ಕಾಲ್ಗಳಿಗೆ ಹೂಡಿ
ನಾಲ್ಕು ವೇದಗಳನ್ನು ಸರಪಳಿಯ ಮಾಡಿ
ಅನೇಕ ಭೂಮಂಡಲವ ಹಲಗೆಯನು ಮಾಡಿ
ಶ್ರೀಕಾಂತನುಯ್ಯಾಲೆಯನು ವಿರಚಿಸಿದರು
- ಎಂಬುವ ದಶಾವತಾರಸ್ತುತಿ

ವಿಶಾಲವಾದ ಕಲ್ಪನೆಯನ್ನು ಮಾಟವನ್ನು ಒಳಗೊಂಡು ವ್ಯಾಪಕವಾಗಿ ಮನ ಸೆಳೆಯುತ್ತದೆ.

ಶ್ರೀಪಾದರಾಜರು ಎಂತಹ ಸರಳ ಕನ್ನಡದ ಕೀರ್ತನೆಗಳನ್ನು ರಚಿಸಿರುವರೋ ಹಾಗೆಯೇ ಪಾಂಡಿತ್ಯ ಪೂರ್ಣವಾಗಿ, ಭ್ರಮರಗೀತೆ ಶ್ರೀಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕ, ವಾಗ್ವಜ್ರ (ಸಂಸ್ಕೃತ ರಚನೆ) ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇವೆಲ್ಲ ಅವರ ವಾಗ್ವಿಲಾಸದ ವೈಖರಿಯನ್ನು ವ್ಯಕ್ತಗೊಳಿಸುತ್ತದ.

ಶ್ರೀ ಪಾದರಾಯರನ್ನು ಕುರಿತು ಎಷ್ಟು ತಿಳಿಸಿದರೂ, ಅದು ಕೇವಲ ಮೇಲು ಮೇಲು ನೋಟದ ಸಾಲುಗಳನ್ನು ಹೇಳಿದಂತಾಗುತ್ತದೆ. ಈ ಸಾಲುಗಳಿಗೆ ಇನ್ನೊಬ್ಬ ಅಪರೋಕ್ಷ ಜ್ಞಾನಿಗಳಾದ ವಿಜಯದಾಸರ ಕೃತಿಯ ಕೆಲವು ಸಾಲುಗಳನ್ನು ಉದ್ಧರಿಸುವುದರೊಡನೆ ಪವಮಾನ ಪಾಡಬಹುದೆನ್ನಿಸುತ್ತವೆ.

ಇವರ ಪ್ರಸಾದವಾದರೆ ವ್ಯಾಸಮುನಿರಾಯ
ಕವಿರಾಯ ಪುರಂದರದಾಸರು ಮಿಗಿಲಾ
ದವರ ಕರುಣವಿನ್ನು ಸಿದ್ಧಿಸುವುದು ಕೇಳಿ
ನವ ಭಕುತಿಯು ಪುಟ್ಟುವುದು ವ್ಯಕ್ತವಾಗಿ
ತವಕದಿಂದಲಿ ಚರಮದೇಹವೆ ಬರುವುದು
ದಿವಿಜರು ಒಲಿದು ಸತ್ಕಾರ್ಯ ಮಾಡಿಸುವರು
ಕವಿನುತ ನಮ್ಮ ವಿಜಯವಿಠಲ ರೇಯ
ದಿವಾರಾತ್ರಿಗಳಲಿ ಅವರ ಕೂಡ್ಯಾಡುವ
..........................................
ಕರುಣದಿಂದಲಿ ಮಹಾ ಉತ್ಕೃಷ್ಟ ಪದವೀವ

★★★★★



ಶ್ರೀಪಾದರಾಜ ವಿರಚಿತ

# ನೃಸಿಂಹ ಪ್ರಾದುರ್ಭಾವದಂಡಕ

- ಪ್ರಾ|| ಕೆ. ಆರ್. ನರಸಿಂಹನ್.

ನಮಃ ಶ್ರೀಪಾದರಾಜಾಯ
ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ
ವಿಜಯಾರ್ಯಾಯ ತೇ ನಮಃ

ಶ್ರೀಪಾದರಾಜರು ದಾಸಸಾಹಿತ್ಯದ ಪ್ರಾತಃಸ್ಮರಣೀಯರ ಅಗ್ರಪಂಕ್ತಿಯಲ್ಲಿದ್ದಾರೆ. ಇವರು ಜೀವಿಸಿದ್ದ ಕಾಲ ಕ್ರಿ.ಶ. 1404 ರಿಂದ 1502 ರವರೆಗೆ ಎಂದರೆ ತೊಂಬತ್ತೆಂಟು ವರ್ಷಗಳೆಂದು ಹೇಳಬಹುದು.

'ದಾಸವಾಙ್ಮಯ ಮಂದಿರ'ಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಇವರು ತಮ್ಮ ಜೀವನದ ಬಹುಮುಖ್ಯ ಭಾಗವನ್ನು ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ ಸಾರ್ಥಕವಾಗಿ ಸವೆಸಿದ್ದಾರೆ. ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ತನ್ನ ಸಾಧನೆಯ ಶಿಖರವನ್ನು ತಲುಪಿದ 'ದಾಸವಾಙ್ಮಯ'ವನ್ನು ಶ್ರೀಪಾದರಾಯರ ಶಿಷ್ಯರಾದ ವ್ಯಾಸರಾಯರೂ, ಇವರ ಶಿಷ್ಯರಾದ ಪುರಂದರ, ಕನಕದಾಸರೂ ಉಜ್ವಲವಾಗಿ ಬೆಳಗಿಸಿದ್ದಾರೆ. ನಂತರದಲ್ಲಿ ಈ ಶ್ರೇಷ್ಠವಾದ ಸಾಹಿತ್ಯಕ್ಕೆ ಮೆರಗು ನೀಡಿದವರು ವಿಜಯ ದಾಸರು, ಜಗನ್ನಾಥ ಗೋಪಾಲ ದಾಸರಾಗಿದ್ದಾರೆ.

## ಜೀವನ ಚಿತ್ರ

ಶ್ರೀಪಾದರಾಜರು ಯತಿವರೇಣ್ಯರೂ ಆಗಿದ್ದರು. ಮುಳಬಾಗಿಲಿನಲ್ಲಿ ಇಂದಿಗೂ ಇವರ ಆರಾಧನೆ ಪ್ರತಿವರ್ಷ ಜ್ಯೇಷ್ಠ ಶುದ್ಧ ಚತುರ್ದಶಿಯಂದು ತುಂಬ ವೈಶಿಷ್ಟ್ಯಪೂರ್ಣವಾಗಿ ನಡೆದುಕೊಂಡು ಬರುತ್ತಿದೆ. ಇವರ ಬೃಂದಾವನವಿರುವ ಸ್ಥಳವನ್ನು 'ನರಸಿಂಹತೀರ್ಥ'ವೆಂದು ಕರೆಯುತ್ತಾರೆ. ಮಾಧ್ವಪರಂಪರೆಯಲ್ಲಿ ಬಂದ ಪದ್ಮನಾಭ ತೀರ್ಥರ ಪೀಳಿಗೆಯವರಾದ ಇವರು ಮುಳಬಾಗಿಲಿನ ಮಠಕ್ಕೆ ಒಂಬತ್ತನೆ ತಲೆಮಾರಿನವರಾಗಿ ಪೀಠವನ್ನಲಂಕರಿಸಿ ಪ್ರಸಿದ್ಧರಾಗಿದ್ದರು. ಲಕ್ಷ್ಮೀನಾರಾಯಣ ಎಂಬ ಬಾಲಕನಿಗೆ ಸನ್ಯಾಸವನ್ನು ನೀಡಿದ ನಂತರ ಶ್ರೀಪಾದರಾಜರೆಂಬ ಅಭಿಧಾನವನ್ನು ಇತ್ತವರು ರಘುನಾಥ ತೀರ್ಥರೆಂಬುವರು. ವೈದಿಕ ಧರ್ಮದ ಜಟಿಲತೆಯನ್ನು ಸರಳತೆಗೆ ಪರಿವರ್ತಿಸಿದ ಪ್ರಖ್ಯಾತಿಗೆ ಶ್ರೀಪಾದರಾಜರು ಪಾತ್ರರಾಗಿದ್ದಾರೆ. ಇದಕ್ಕಾಗಿ ಇವರು ಭಾಗವತರ ತಂಡವೊಂದನ್ನು ಏರ್ಪಡಿಸಿ ಪೂಜಾ ಕಾಲದಲ್ಲಿ ವೇದ ಪಾರಾಯಣದಂತೆ ಅವರಿಂದ ದೇವರನಾಮಗಳನ್ನು ಹಾಡಿಸಿದವರಾಗಿದ್ದಾರೆ.

ಭಾಗವತದ ಚಿಕ್ಕಚಿಕ್ಕ ಕತೆಗಳನ್ನು ಸರಳವಾಗಿ, ರಸವತ್ತಾಗಿ, ಪುಟ್ಟಹಾಡುಗಳ ಮೂಲಕ ಹಾಡಿದ ಕೀರ್ತಿಗೆ ಶ್ರೀಪಾದರಾಜರು ಪಾತ್ರರಾಗಿರುತ್ತಾರೆ. ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿದ್ದ 'ಮುಳವಾಯಿ ರಾಜ್ಯ'ದ ಪತಾಕೆಯನ್ನು ಧರ್ಮಸಾಮ್ರಾಜ್ಯದಲ್ಲಿ ಹರಡಿಸಿದ ಶ್ರೇಯಸ್ಸು ಇವರದ್ದಾಗಿದೆ. 'ಗೋಪಿಗೀತ', 'ವೇಣುಗೀತ', 'ಭ್ರಮರ ಗೀತ'ಗಳನ್ನು ಇವರು ರಚಿಸಿರುತ್ತಾರೆ. ದಾಸಸಾಹಿತ್ಯವನ್ನು ಇವರ ಕಾಲಕ್ಕೂ ಹಿಂದೆ ಗುರುತಿಸಬಹುದಾದರೂ ಇವರಿಂದ ಇದಕ್ಕೊಂದು ವ್ಯವಸ್ಥಿತವಾದ ಹೆದ್ದಾರಿಯು ನಿರ್ಮಾಣವಾಗಿದೆಯೆಂದು ಹೇಳಬಹುದು. ಈ ಕಾರಣಕ್ಕಾಗಿಯೇ ನಾವಿಂದು ಇವರನ್ನು ದಾಸವಾಙ್ಮಯದ ಮುಂಚೂಣಿಯಲ್ಲಿ ಇರಿಸಿದ್ದೇವೆ.

**ಅಪೂರ್ವಕೃತಿ :**

'ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ'ವು ಶ್ರೀಪಾದರಾಜರ ಕೃತಿಗಳಲ್ಲಿ ವಿಶಿಷ್ಟವಾದದ್ದಾಗಿದೆ. ಇದೊಂದು ಅಪೂರ್ವವಾದ ಕೃತಿಯಾಗಿದೆ. ದಂಡಕವನ್ನು ಸಂಸ್ಕೃತದ ಛಂದೋರೂಪಕ್ಕೆ ಹೋಲಿಸ ಬಹುದು. ಇದರಲ್ಲಿ ಇಪ್ಪತ್ತಾರು ಅಕ್ಷರಗಳನ್ನು ಮೀರಿದ, ನಿಯಮಿತವಾದ, ಗಣನಿಯಮಕ್ಕೆ ಒಳಪಟ್ಟ, ಸಂಖ್ಯಾನಿಯಮಕ್ಕೆ ಹೊರತಾದ, ಸುಂದರವಾದ ಸಾಲುಗಳ ರಚನೆಯಿರುತ್ತದೆ. ಇದು ವರ್ಣವೃತ್ತವಾಗಿರುತ್ತದೆ. ಗದ್ಯದ ಪ್ರಭೇದವೆಂದು ಸಹ ದಂಡಕವನ್ನು ಛಂದಃಶಾಸ್ತ್ರ ವಿದ್ವಾಂಸರು ಗುರುತಿಸಿದ್ದಾರೆ. ಈ ದಂಡಕದಲ್ಲಿ ಸಾಮಾನ್ಯವಾಗಿ ಐದೈದು ಮಾತ್ರೆಯ ಗಣಗಳು ಬಂದಿರುತ್ತವೆ. ಶ್ರೀಪಾದರಾಜರ ರಚನೆಯಲ್ಲಿ ದಂಡಕದ ಎಲ್ಲ ಗುಣಲಕ್ಷಣಗಳನ್ನು ಕಾಣಬಹುದಾಗಿದೆ





ಪತಿಕರಿಸಬೇಕೆನ್ನ ಪ್ರಹ್ಲಾದವರದನೆ.

ದಂಡಕದಲ್ಲಿ ಪ್ರಾಸ ನಿರ್ಬಂಧವಿರುವುದಿಲ್ಲ. ನಿರರ್ಗಳವಾಗಿ ಸಾಗುವ ಧಾಟಿ ಇದರದ್ದಾಗಿದೆ. ಮೊದಲೇ ಪ್ರಚಲಿತವಾದ ಲಲಿತ ರಗಳೆಯಲ್ಲಿರುವ ಪ್ರಾಸನಿಯಮವನ್ನು ಬಿಟ್ಟು ಆಧುನಿಕ ಕನ್ನಡ ಕವಿಗಳು ಬಳಕೆಗೆ ತಂದಿರುವ ಸರಳ ರಗಳೆಯನ್ನೇ ಇವರ ದಂಡಕವೂ ಬಹುಮಟ್ಟಿಗೆ ಹೋಲುತ್ತಿದೆ. ದಂಡಕದಲ್ಲಿನ ಈ ರೀತಿಯ ಛಂದೋನಿಯಮಗಳು ಆದರ ಪ್ರಸಿದ್ಧಿಗೆ ಕಾರಣವಾಗಿವೆ. ಅದು ಸ್ಥಿರವಾಗಿ ನೆಲೆಗೊಳ್ಳಲು ಸಹಾಯಕವಾಗಿದೆ ಎನ್ನಬಹುದು.

ಮಹಾವಿಷ್ಣುವು ನರಸಿಂಹಾವತಾರವನ್ನೆತ್ತಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನನ್ನು ಅನುಗ್ರಹಿಸಿದ ಕತೆಯನ್ನು ಭಾಗವತದಲ್ಲಿ ವಿವರವಾಗಿ ಕಂಡಿರುತ್ತೇವೆ. ಸಪ್ತಮ ಸ್ಕಂಧದ ಎಂಟನೆಯ ಅಧ್ಯಾಯವನ್ನು ಸುಂದರವಾಗಿ ಕನ್ನಡಕ್ಕೆ ದಂಡಕವೆಂಬ ಧಾಟಿಯಲ್ಲಿ ಶ್ರೀಪಾದರಾಜರು ರೂಪಾಂತರ ಮಾಡಿ ನೀಡಿರುತ್ತಾರೆ. ಇದನ್ನು ಕನ್ನಡಕ್ಕೆ ಪರಿವರ್ತಿಸುವ ಸಂದರ್ಭದಲ್ಲಿ ಕೃತಿಕಾರರು ವಹಿಸಿರುವ ಸ್ವಾತಂತ್ರ್ಯವೂ ಎದ್ದುಕಾಣುತ್ತದೆ.

**ದಂಡಕದ ವಿಶಿಷ್ಟತೆ :**

ಶ್ರೀಪಾದರಾಜರ ಈ ರಚನೆಯಲ್ಲಿ ಸಮಸ್ತ ಪಾಪಗಳನ್ನೂ ಪರಿಹಾರ ಮಾಡತಕ್ಕ ದೇವರ ದೇವನಾದ ನರಸಿಂಹನು ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುವ ಹಂಬಲದ ಮೊರೆಯಿದೆ. ಉತ್ತಮವಾದ ನಿವೇದನಾ ರೂಪದಲ್ಲಿರುವ ಕೃತಿಯಲ್ಲಿ ಸೊಗಸಾದ ಉಪಮಾನಗಳಿವೆ. ಪರಮಾತ್ಮನ ಹೃದಯ ವೈಶಾಲ್ಯವನ್ನು ಇಲ್ಲಿ ಕಾಣಬಹುದಾಗಿದೆ. ಆತನ ಕರುಣಾಸಮುದ್ರಕ್ಕೆ ಬಂದು ಸೇರುವ ಹೊಳೆಗಳು ಅನಂತವಾದವು. ಇಂತಹ ಸಾವಿರಾರು ಹೊಳೆಗಳ ರೂಪದಲ್ಲಿರುವ ಭಕ್ತರ ಪ್ರಾರ್ಥನೆಯಿಂದ ಸಂತುಷ್ಟನಾಗುವ ಸ್ವಾಮಿಯು ಬೇಡಿದವರ ಇಷ್ಟಾರ್ಥಗಳನ್ನು ನೆರವೇರಿಸಿ ಕಾಪಾಡುವನೆಂಬ ಸದಾಶಯವನ್ನು ಇದರ ಹಿನ್ನೆಲೆಯಲ್ಲಿ ಕಾಣಬಹುದು.

'ನರಸಿಂಹ ದಂಡಕ' ದಲ್ಲಿ ಐದು ನೂರಕ್ಕೂ ಹೆಚ್ಚು ಪಾದಗಳಿವೆ. ದೀರ್ಘವಾದ ಕೃತಿಯನ್ನು ಅಭ್ಯಾಸ ಮತ್ತು ಸೌಕರ್ಯಕ್ಕಾಗಿ ಹತ್ತು ಸಾಲಿನ ಪದ್ಯಗಳಲ್ಲಿ ವಿಭಾಗಿಸಲಾಗಿದೆ. ಇಲ್ಲಿನ ಭಾಷೆ ಮತ್ತು ಪದರಚನಾ ಸಾಮರ್ಥ್ಯವು ವಿಶೇಷ ರೀತಿಯದ್ದಾಗಿರುವಂತೆ ಕಂಡು ಬರುತ್ತದೆ. ಭಗವಂತನ ಮೇಲಿನ ಭಕ್ತಿಯನ್ನು ತುಂಬುಹೊನಲಿನ ರೂಪದಲ್ಲಿ ಹರಿಸಲು ಈ ರೀತಿಯ ಧಾಟಿಯನ್ನು ಕೃತಿಕಾರರು ಕಂಡುಕೊಂಡಿರಬೇಕೆಂದು ಅರಿವಾಗುತ್ತದೆ. ಮೂಲದ ಉನ್ನತ ಭಾವನೆಗಳನ್ನು ತಮ್ಮ ರಚನೆಯಲ್ಲಿ ತರಬೇಕೆಂಬ ಅಪೇಕ್ಷೆಯನ್ನು ಶ್ರೀಪಾದರಾಜರು 'ನರಸಿಂಹ ದಂಡಕ'ದ ಮೂಲಕ ವ್ಯಕ್ತಪಡಿಸಿರುವುದು ಇಲ್ಲಿ ಸಾರ್ಥಕವಾಗಿರುವಂತಿದೆ.

ಶ್ರೀಪಾದರಾಜರ ಕೃತಿಯು ಭಾಗವತದಲ್ಲಿ ಬರುವ ಪ್ರಹ್ಲಾದ ಬೋಧನೆಯ ಭಾಗದಿಂದ ಆರಂಭವಾಗುತ್ತದೆ. ಇದನ್ನು ಇಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪಿಸಲಾಗಿದೆ.

**ದಂಡಕದ ಆರಂಭ :**

ಶ್ರೀಕಾಂತನ ಜ್ಞಾನ, ಭಕ್ತಿಕ್ರಿಯೆಗಳನ್ನು ಬಾಲಕ ಪ್ರಹ್ಲಾದನು ಕತೆಯ ರೂಪದಲ್ಲಿ, ಬೋಧನಾರೂಪದಲ್ಲಿ ತನ್ನ ಸ್ನೇಹಿತರಿಗೆ ಹೇಳುತ್ತಾನೆ. ಇದನ್ನು ಕೇಳಿದ ದೈತ್ಯ, ಬಾಲಕರಿಗೆ ತಾವೂ ಸಹ ವಿಷ್ಣುವಿನ ಶರಣಾಗತಿಯ ಮಾರ್ಗದಲ್ಲಿಯೇ ನಡೆಯಬೇಕೆಂದು ಮನವರಿಕೆ ಆಗುವುದಲ್ಲದೆ, ಪರಮಾತ್ಮನ ಸೇವೆಗೆ ಅಡ್ಡಿಯಾಗಿರುವ ಅರಿಷಡ್ವರ್ಗಗಳನ್ನು ಜಯಿಸಬೇಕೆಂಬ ಭಾವನೆ ಅವರ ಮನಸ್ಸಿನಲ್ಲಿ ಬಲವಾಗುತ್ತದೆ. ತಾವು ಇಲ್ಲಿಯವರೆಗೆ ತಮ್ಮ ಗುರುಗಳ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದ ಧರ್ಮಾರ್ಥಕಾಮ ವಿಷಯದ ಗ್ರಂಥಗಳು, ಸಂಸಾರ ಸಂಬಂಧಿಯಾದ ಬೋಧನೆಗಳು ವ್ಯರ್ಥವಾದದ್ದೆನ್ನಿಸುತ್ತವೆ. ಅದರಲ್ಲಿಯಾವುದೇ ತಿರುಳಿಲ್ಲವೆಂದೂ ಅವರಿಗೆ ಮನವರಿಕೆಯಾಗುತ್ತದೆ.

ದೈತ್ಯರ ಗುರುಗಳಾದ ಶುಕ್ರಾಚಾರ್ಯರ ಮಕ್ಕಳು ಇವರಿಗೂ ಸಹ ಪಾಠಪ್ರವಚನವನ್ನು ನಡೆಸುತ್ತಿರುತ್ತಾರೆ. ಗುರುಗಳಿಗೆ ತಮ್ಮ ಶಿಷ್ಯರವರ್ತನೆಯು ಕಕ್ಕಾಬಿಕ್ಕಿಯಾಗುವಂತೆ ಮಾಡುತ್ತದೆ. ಇದರಿಂದ ಅವರಿಗೆ ಬೇರೆ ದಾರಿಯೇ ಕಾಣದಂತಾಗುತ್ತದೆ. ಪ್ರಹ್ಲಾದನ ದುರ್ಬೋಧನೆಗೆ ಇವರು ಒಳಗಾದ ಕಾರಣ ತಾವೇನೂ ಮಾಡಲಾಗದವರೆಂದು ನಿಶ್ಚಯಿಸಿದ ಅವರು ರಾಜನಾದ ಹಿರಣ್ಯಕಶಿಪುವಿಗೆ ವಿಚಾರವನ್ನು ನಿವೇದಿಸುವುದೇ ಉಳಿದಿರುವ ಮಾರ್ಗವೆಂದು ಮನಗಂಡು ಕೂಡಲೇ ರಾಜನಿಗೆ ಎಲ್ಲ ಸಂಗತಿಗಳನ್ನೂ ಅರುಹುತ್ತಾರೆ.

**ರಾಜನಿಗೆ ದೂರು – ಅವನ ಕೋಪ :**

ದಾನವಾಗ್ರಣಿಯೂ, ಕೋಪಸಂಶೀಘ್ರನೂ ಆದ ಹಿರಣ್ಯಕಶ್ಯಪನು ಆತನ ಮಗ ಪ್ರಹ್ಲಾದನ ದುರ್ಮಾರ್ಗ ಬೋಧನೆಯ ವಿಚಾರವನ್ನೂ, ಇತರ ಚೇಷ್ಟೆಗಳನ್ನೂ ಗುರುಗಳ ಮಾತುಗಳ ಮೂಲಕ ಕೇಳಿದ. ದಾನವಶ್ರೇಷ್ಠನಿಗೆ ತನ್ನ ಕರ್ಣಗಳನ್ನು ಕಠೋರವಾದ ಬಾಣಗಳು ಇರಿಯುವಂತಾಯಿತು. ಅಪ್ರೀತಿ, ದುರ್ನೀತಿ ಗಳಿಂದ ಕೂಡಿದ ಮಗನ ವರ್ತನೆಗೆ ಅಸಾಧ್ಯವಾದ ಕೋಪವುಂಟಾಗಿ ತನ್ನ ಪುತ್ರನ ಸಂಹಾರಕ್ಕೆ ಅವನು ಚಿತ್ತವಿಟ್ಟವನಾಗುತ್ತಾನೆ.

ಸಾಧು ಸ್ವಭಾವದವನಾದ, ಸದ್ಭಕ್ತಿಯಿಂದ ಕೂಡಿದವನಾದ, ಮಹಾಭಕ್ತ ಪ್ರಹ್ಲಾದನು ತನ್ನ ಮುಂದೆ ಅಂಜಲೀಬದ್ಧನಾಗಿ ಕೈಜೋಡಿಸಿ ಕೊಂಡು ನಿಂತಿದ್ದರೂ ತಂದೆಯಾದ ಹಿರಣ್ಯಕಶಿಪು ಅವನ ಮೇಲೆ ಪಾದಾಹತವ್ಯಾಳಿಯಂತೆರಗಿ ಆಕ್ರಮಣ ಮಾಡುವುದಕ್ಕೆ ಸಿದ್ಧನಿರುತ್ತಾನೆ. ಪ್ರಹ್ಲಾದ ಧೀಮಂತನೊಂದಿಗೆ ಎತ್ತರವಾದ ಧ್ವನಿಯಲ್ಲಿ ಕೂಗಿ ಮಾತನಾಡುವ ಇವನ ದುಷ್ಟಸ್ವಭಾವವನ್ನು ದಂಡಕದಲ್ಲಿ ಯಥೋಚಿತವಾದ ಪದಗಳಿಂದ ಸ್ವಾರಸ್ಯ ಕೆಡದಂತೆ ವರ್ಣಿಸಲಾಗಿದೆ.

ಹೋಯೆಲೋ
ದುರ್ವಿನಿತಾಯೆಲೋ

ಕೈಹಿಡಿದು ಕಾಯಯ್ಯ ಕನಕಕಶ್ಯಪಶತ್ರು.



ಮಂದ ಬುದ್ಧೇಯೆಲೋ
ಇಂತು ನೀ ಸ್ತಬ್ಧನಾದೇತಕೋ ವಂಶಘಾ
ತೀಯೆಲೋ ಪಾಪಜಾತೀಯೆ
ನೀ ಹೀಗೆ ಮ
ಹ್ಹಾಸನಾತೀತನಾಗಿಪ್ಪೊಡೇ ನಿನ್ನನಿ
ನ್ನಾ ಯಮದ್ವಾರಕೇ ಕಳುಹುವೆಂ
ನೋಡೆಲಾ

-ಎಂಬ ಈ ಮೂಲಪಾಠವನ್ನು ಗಮನಿಸಿದಾಗ ಸಂದರ್ಭದ ತೀಕ್ಷ್ಣತೆ ಮನದಟ್ಟಾಗುತ್ತದೆ.

ಹೀಗೆಯೇ ಮುಂದುವರೆದ ಹಿರಣ್ಯಕಶಿಪು-

ನಾನು ಕೋಪಿಷ್ಠನಾಗಿಪ್ಪೊಡೇ ಅಂಜಿ ಮೂ
ರ್ಲೋಕಗಳಂ ಲೋಕಪಾನೀಕಗಳ್ ಕಂಪ
ಕಾಣುತ್ತವಿಂಥಾ ಬಲಿಷ್ಠನ್ನ ನೀನೆನ್ನ ಸಂ
ಪದ್ಬಲ ಶ್ರೀಯನಾಶ್ಯೆಸದೇ ಬಿಟ್ಟರಿ
ನ್ನಾವನಲ್ ನೀಂ ಬಲಶ್ರೀಯನಾಶ್ಯೆಸುವೇ

– ಎಂಬುದಾಗಿ ಕೇಳುವ ಮಾತುಗಳಲ್ಲಿ ದಾನವನ ಶಾಸನ ವಿಧಿಸಿದ ಎಚ್ಚರಿಕೆಯನ್ನು ಕಾಣಬಹುದಾಗಿದೆ. ತನ್ನ ಮಗ ತನ್ನ ಆಜ್ಞೆಯನ್ನು ಮೀರಿದ್ದಾನೆಂಬ ಸಂಶಯಾತ್ಮಕ ಭಾವನೆ ಆ ದೈತ್ಯಾಗ್ರಣಿಯಲ್ಲಿದ್ದಿರಬೇಕೆಂಬುದು ಅವನ ಮಾತುಗಳ ಮೂಲಕ ಮನವರಿಕೆ ಆಗುತ್ತದೆ.

**ಅಧ್ಯಾತ್ಮಭಾವ :**

ಹಿರಣ್ಯಕಶಿಪುವಿನ ನುಡಿಗಳಲ್ಲಿ ಅಜ್ಞಾನ ಬದ್ಧವಾದ ಧಾರ್ಷ್ಟ್ಯವಿದ್ದರೆ ಪ್ರಹ್ಲಾದನ ನಯವಾದ ಮಾತುಗಳಲ್ಲಿ ಅಧ್ಯಾತ್ಮಭಾವನೆ ಅಡಕವಾಗಿದೆ.

ತಂದೆ ಕೇಳಯ್ಯ ಬ್ರ
ಹ್ಮಾದಿ ಅಸ್ತಂಭ ಪರ್ಯಂತವುಂ ಜಂಗಮ
ಸ್ಥಾವರಾತ್ಮ ಪ್ರಪಂಚೋಚ್ಚನೀಚ ಪ್ರಜಾ
ನೀಕ ಯಾವತ್ತದಾವಾತನಾಧೀನದ
ಲ್ಲಿಪ್ಪುದೋ ಆತನೇ ಎನ್ನಗೇ ನಿನ್ನಗೇ
ಇನ್ನು ಮಿಕ್ಕಾದ ಚೈತನ್ಯಕ್ಕೆಲ್ಲಾ ಬಲ
ಶ್ರೀಯು ತಾನಾದನೇ ಕಾದನೇ
ಕಾಲನೇ ಕಾಲರೂ
ಪೀಶ್ವರೋರುಕ್ರಮಾಕಾರನೆಂಬಾತನೇ
ಆತನೇ ಆತನೇ ತೇಜ ಓಜಸ್ಸಾಹಾ
ಸತ್ವ ಸಂಪದ್ಬಲ ಶ್ರೀಂದ್ರಿಯಾತ್ಮನ್

- ಎಂಬುದಾಗಿ ಪ್ರಹ್ಲಾದನು ನುಡಿದ ವಾಕ್ಯಗಳು ಎಂತಹ ಹೀನರಾದವರಲ್ಲೂ ಭಗವಂತನನ್ನು ಕಾಣುವ ಹಂಬಲವನ್ನು ಕೆರಳಿಸುತ್ತದೆ.

ಪ್ರಹ್ಲಾದನು ತನ್ನ ತಂದೆಗೆ ಹೇಳಿದ ಮಾತುಗಳಲ್ಲಿ ಭಗವಂತನ ಸರ್ವಾಂತರ್ಯಾಮಿ ತತ್ತ್ವವು ಅಡಕವಾಗಿದೆ. ಜಗತ್ ಸೃಷ್ಟಿ - ಪುಷ್ಟಿಗಳನ್ನು ನಿರ್ವಹಿಸುತ್ತಿರುವ ಆತನ ಮಹಿಮೆಯು ಇಲ್ಲಿ ವ್ಯಕ್ತವಾಗಿ ಕಾಣುತ್ತದೆ. ಸ್ಥಾವರ - ಜಂಗಮ, ಉಚ್ಚ - ನೀಚಗುಣಗಳ ವ್ಯಾಖ್ಯಾನವು ಅಡಕವಾಗಿದೆ. ನಮ್ಮ ಅವಿವೇಕವನ್ನು ಬಿಟ್ಟು ಆತನನ್ನು ಕಾಣುವುದರಿಂದ ಆತನಲ್ಲಿಯೇ ನಮ್ಮ ಚಿತ್ತವನ್ನು ನೆಡುವುದರಿಂದ ಎಲ್ಲ ವೈರಿಗಳನ್ನು ಸಾಧಿಸಿದಂತಾಗುತ್ತದೆಂಬ ಸಾರವನ್ನೊಳಗೊಂಡಿದೆ. ದೇಹವೆಂಬ ರಾಜಧಾನಿಯನ್ನು ಹಾಳುಮಾಡುವ ಅರಿಷಡ್ವರ್ಗಗಳನ್ನು ಗೆಲ್ಲದೆ ಸರ್ವದಿಕ್ಕುಗಳನ್ನು ಗೆದ್ದೆವೆಂಬ ಅಹಂಕಾರಕ್ಕೆ ಒಳಗಾಗುವುದು ಸರ್ವಥಾಯೋಗ್ಯವಲ್ಲವೆಂಬ ಎಚ್ಚರಿಕೆಯನ್ನು ನೀಡುವಂತಿದೆ. ಇದು ಯಾರಿಗೂ ಶ್ರೇಯಸ್ಕರವಾದದ್ದಲ್ಲವೆಂಬ ಅರಿವನ್ನು ಉಂಟುಮಾಡುತ್ತದೆ.

**ಕೋಪದ ದಳ್ಳುರಿ :**

ಶತ್ರುವಿನ ಹಾಗೆ ಕಾಣುವ ತನ್ನ ಪುತ್ರನ ಮಾತುಗಳನ್ನು ಕೇಳಿದ ಹಿರಣ್ಯಕಶಿಪು ಕನಲಿ ಕೆಂಡಾಮಂಡಲವಾಗುತ್ತಾನೆ. ಸಿಂಹಾಸನವನ್ನು ಬಿಟ್ಟು ಧಿಗ್ಗನೆ ಮೇಲೇಳುತ್ತಾನೆ. ಕೋಪದ ದಳ್ಳುರಿ ಧಗ್ಗನೆ ಹೊತ್ತಿಕೊಳ್ಳುತ್ತದೆ.

ಆ ಸಂದರ್ಭದಲ್ಲಿ ಆತನಾಡಿದ ಮಾತುಗಳು-

ಹೋಯೆಲಾ ಪುತ್ರನೇ ಇಂದು
ನಾವೊಂದು ಪೇ
ಳುತ್ತಿದ್ದರೊಂದಕ್ಕೆ ಹತ್ತಾಗಿ ನೀ
ನೇವನೋ ವಿಷ್ಣುವೆಂಬಾತ ಬೇರೊಬ್ಬ ತಾ
ನಿಪ್ಪನೆಂದೂಹಿಸುವೆಯಾ
ಹೋ ಹೋಯೆಲಾ
ಸಾವಿಗೀ ಬುದ್ಧಿ ನೀ ಸಿದ್ಧಮಾಡೀದಿ

- ಹೀಗೆ ಹೇಳುವ ಮಾತುಗಳಿಂದ ಅವನ ನಿರ್ಧಾರವು ಪ್ರಕಟವಾದಂತಾಗಿದೆ.

ಮುಂದುವರೆದ ಹಿರಣ್ಯಕಶಿಪು ಪ್ರಹ್ಲಾದನಿಗೆ ಹೇಳಿದ ಮಾತುಗಳಿವು-

ಎಲೋ ಮಂದನೇ ಮಂದಭಾ
ಗ್ಯೋಕ್ತಿಗಳ್ ಏಕೆ ನೀನಾಡುವೇ ಅಕ್ಕಟಾ
ಎನ್ನಗಿನ್ನಾ ಜಗನ್ನಾಥ ನಿನ್ನಾವನೋ
ಆತನೆಲ್ಲಿಪ್ಪ, ಸರ್ವತ್ರದಲ್ಲಿಪ್ಪ ನೀ
ನೆಂದಡೇ ಡಿಂಭಕಾಡಂಭಕಾಡೋಣಗಳ್
ಸಾಕು ಮಾಡಿನ್ನು ಮೇಲೀ ಸಭಾಸ್ತಂಭದಲ್
ಶೀಘ್ರ ಸಂರಂಭಧಲ್ ತೋರು

- ಎಂದು ಸವಾಲು ಹಾಕುತ್ತಾನೆ. ಪ್ರಹ್ಲಾದನಿಗೆ ತನ್ನ ಸ್ವಾಮಿಯನ್ನು ಕುರಿತು ಪ್ರಾರ್ಥಿಸಲೂ ಅವಕಾಶವಿಲ್ಲದ ಪರಿಸ್ಥಿತಿ.

**ಕಂಭದ ಘಟನೆ :**

ಪ್ರಹ್ಲಾದನು ತನ್ನ ಸ್ವಾಮಿಯನ್ನು ಅರ್ಥಾತ್ ನರಹರಿಯನ್ನು ಹಿರಣ್ಯಕಶಿಪು ಸೂಚಿಸಿದ ಸ್ತಂಭದಲ್ಲಿ ತೋರದೇ ಹೋದಲ್ಲಿ ತಾನು ಅವನ ಶಿರಚ್ಛೇದ ಮಾಡುವೆನೆಂದೂ, ಆ ಸಮಯದಲ್ಲಿ ಅವನು ಹೇಳಿದ ವಿಷ್ಣುವೆಂಬಾತನು ಇದಕ್ಕೆ ಅಡ್ಡಬರುವನೇನೊ ನೋಡೋಣವೆಂದು, ಮತ್ತೊಂದು ರೀತಿಯಲ್ಲಿ ಪರಮಾತ್ಮನಿಗೇ ಸಡ್ಡು ಹೊಡೆದು ನಿಂತಿರುತ್ತಾನೆ. ಇಲ್ಲೆಲ್ಲ ಅವನ ಕ್ರೋಧಾಗ್ನಿಯನ್ನು ದುರ್ಭಾಷೆಯನ್ನು ಕಾಣುತ್ತೇವೆ.

ತನ್ನ ಪುತ್ರನನ್ನು ಅನೇಕ ವಿಧವಾಗಿ ದೂರುತ್ತ ಸಾಗಿದ ಹಿರಣ್ಯಕಶಿಪು ತನ್ನ ಕೈಲಿ ಖಡ್ಗವನ್ನು ಹಿಡಿದುಕೊಂಡು ಮುಷ್ಟಿಯಿಂದ ಬಲವಾಗಿ ಸಭಾಭವನದ ಕಂಭವನ್ನು ಗುದ್ದುತ್ತಾನೆ. ಕಂಭದ ವಿವರಣೆ ಈ ಸಂದರ್ಭದಲ್ಲಿ ತುಂಬಾ ಸೊಗಸಾಗಿ ಮೂಡಿಬಂದಿದೆ. ಅದು ದುಷ್ಟಾಸುರೀ ಗರ್ಭಸಂರಂಭದಂತೆ, ಪ್ರಕಾಶಿಸುವ ಮೇಘಮಾರ್ಗದ ಸಮಾರಂಭದಂತೆ,



ಮನದಲ್ಲಿ ನೆಲೆಸಯ್ಯ ದೇವ ನರಹರಿಯೆ.

ವೈಷ್ಣವೋತ್ಕೃಷ್ಟ ವಿಶ್ಕಂಭದಂತೆ, ಶಾತಕುಂಭದಂತೆ - ಎಂದರೆ ಚಿನ್ನದ ಮಡಿಕೆಯಂತೆ, ರತ್ನಗಳ ಹಾಗೆ ಹೊಳೆಯುವ ಚಿತ್ರಪ್ರಭಾಗುಂಭದಂತೆ ಕಂಡುಬರುತ್ತಿತ್ತು. ಈ ರೀತಿಯ ವಿಶಿಷ್ಟವಾದ ಕಂಭಕ್ಕೆ ಮುಷ್ಟಿಯಿಂದ ಪ್ರಹಾರವಾದ ಕೂಡಲೇ ಅದು ಫಳ್ - ಫಳಾರನೆ ಬ್ರಹ್ಮಾಂಡವನ್ನೇ ಒಡೆದುಹಾಕುತ್ತಿದೆಯೇನೋ ಎಂಬಂತೆ ಸೀಳುಬಿಟ್ಟಿತು. ಇದಾವ ಭೀಕರತೆಯ ಮುನ್ಸೂಚನೆಯೋ ಎಂಬ ಭಯಭ್ರಾಂತಿಯಿಂದ ಕೂಡಿದವರಾಗಿ ಬ್ರಹ್ಮಾದಿಗಳು ವ್ಯಾಕುಲ ರಾದರು.

ಪ್ರಹ್ಲಾದನನ್ನು ಚಿತ್ರಹಿಂಸೆಗೊಳಪಡಿಸಿ ಕೊಲ್ಲುವೆನೆಂದು ಕತ್ತಿಹಿಡಿದು ಕೋಪಗ್ರಸ್ತನಾಗಿ ಓಡಾಡುತ್ತಿದ್ದ ಹಿರಣ್ಯಕಶಿಪುವಿಗೆ ಕಂಭವು ಹಾಗೆ ಹೋಳಾದ ಕೂಡಲೆ ಕಾಲೇ ಆಡದ ಹಾಗಾಯಿತು. ಆ ಮಹಾಕಂಭದಿಂದ ಹೊರಟ ಭಯಂಕರ ಶಬ್ದವು ಅವನನ್ನು ಅಡ್ಡಗಟ್ಟಿ ಹಾಕಿತ್ತು. ಅವನು ಎಲ್ಲಿಗೂ ಓಡಾಡದ ಹಾಗೆ ಅಲ್ಲಾಡದೇ ನಿಂತುಬಿಟ್ಟನು. ಆಸುರೀ ಹಿಂಡುಗಳು, ಭೂತಭೇತಾಳಿಕಾ ತಂಡಗಳು, ಶಾಕಿನೀ - ಡಾಕಿನೀ ದಂಡುಗಳು, ಆ ಮಹಾರವಕ್ಕೆ ತತ್ತರಿಸಿದವು. ಅಲ್ಲಿಂದ ಹೊರಹೊಮ್ಮಿದ ಬೆಂಕಿಯ ಜ್ವಾಲೆಗಳು ಸಮಸ್ತವನ್ನೂ ನುಂಗಿಹಾಕುವಂತೆ ಕಾಣುತ್ತಿದ್ದವು. ಅಲ್ಲಿಂದ ಹೊರಹೊಮ್ಮಿದ ಕಾಳ್ಗಿಚ್ಚು ಮೃಗಸಂಕುಲಕ್ಕೆ ಮಾರಕವಾಗಿ ಛಿಟಛಿಟನೆ ಬಿರುಗಾಳಿಯಿಂದ ಕೂಡಿ ಹರಡಿತು. ಇದು ಯಾವುದೋ ಭೂತಕಾರ್ಯವಾಗಿರಬೇಕೆಂದು ಎಲ್ಲ ಲೋಕಗಳು ಭಾವಿಸಿದ್ದ ಹಾಗೆಯೇ ಅದೇ ವೇಳೆಯಲ್ಲಿ ಅಲ್ಲಿ ಭೃತ್ಯವಾಕ್ಕನ್ನು ಸತ್ಯವಾಕ್ಕನ್ನಾಗಿ ಮಾಡಬೇಕು, ಸರ್ವತ್ರ ತನ್ನ ವ್ಯಾಪಕತತ್ತ್ವವನ್ನು ಪ್ರಕಟಿಸಬೇಕು ಎಂಬ ಕಾರಣದಿಂದ ಜಗದ ತಂದೆಯಾದವನು ಅದ್ಭುತಾಕಾರವನ್ನು ಧರಿಸಿ ಇಡೀ ಸಿಂಹದ ಆಕಾರದ ಹಾಗಲ್ಲದೆ ಇಡೀ ಮಾನವಾಕಾರದ ಹಾಗಲ್ಲದೆ 'ನರಸಿಂಹ' ರೂಪದಿಂದ ಕಂಭದಲ್ಲಿ ಸಂಭೂತನಾದನು.

**ವಿಚಿತ್ರರೂಪ ವೈಭವ :**

ದಿತಿಯ ಮಗನಾದ ದೈತ್ಯನಿಗೆ ಇದರ ಹಿನ್ನೆಲೆಯು ಅರಿವಾಗದೆ, ಇದ್ಯಾವುದೋ ವಿಚಿತ್ರರೂಪವಿರಬೇಕೆಂದು ಭಾವಿಸಿ ಯಾವುದೀ ಭೂತವೆಂದು ಮೀಮಾಂಸಬುದ್ಧಿಯಿಂದ ಆಲೋಚಿಸುವಂತೆ ಆಯಿತು. ತನಗೆ ನಿಲುಕದ್ದು ಯಾವುದೂ ಇಲ್ಲವೆಂಬ ಅಹಂಕಾರದಿಂದ ಬೀಗುತ್ತಿದ್ದವನಿಗೆ ಇಂತಹ ಅಪರೂಪದ ಆಕಾರವೊಂದು ತನ್ನ ಮುಂದೆ ನಿಂತಿರುವಾಗ ತಾನೇನು ಮಾಡಬೇಕೆಂಬ ನಿರ್ಣಯವು ಸಾಧ್ಯವಾಗದ ಸ್ಥಿತಿಗೆ ಅವನು ತಲುಪಿರಬೇಕು. ಆದರೂ ತಾನು ಪಡೆದುಕೊಂಡಿರುವ ವರದ ಪ್ರಭಾವವು ಇದ್ದೇ ಇದೆಯೆಂಬ ಅರಿವು ಸಹ ಅವನಲ್ಲಿ ಜಾಗೃತವಾಗಿದ್ದಿರಬೇಕು.

ನರಸಿಂಹರೂಪ ವಿಶ್ಲೇಷಣೆಯನ್ನು ಶ್ರೀಪಾದರಾಜರು ತುಂಬಾ ಸೊಗಸಾಗಿ ಮಾಡಿರುತ್ತಾರೆ. ಅದು ಈ ಸಂದರ್ಭದಲ್ಲಿ ಕೃತಿಯ ಮೂಲಕ ವ್ಯಕ್ತವಾಗಿದೆ. ಜಗತ್ ಸ್ವಾಮಿಯಾದ ಆತನ ಕಣ್ಣುಗಳು ಕಾದ ಬಂಗಾರದಂತೆ ಹೊಳೆಯುತ್ತಿದ್ದವು. ಸಿಂಹದ ಮುಖದ ಸುತ್ತಲೂ ಮೇಲೆದ್ದ ಕೇಸರಗಳು ರಾಶಿರಾಶಿಯಾಗಿ ಕಾಣುತ್ತಿತ್ತು. ಉಗ್ರವಾದ ನಾಸಿಕದ ಹೊಳ್ಳೆಗಳಿಂದ ದೀರ್ಘ ಉಚ್ಛ್ವಾಸ, ನಿಃಶ್ವಾಸಗಳು ಉಂಟಾಗುತ್ತಿದ್ದವು. ಹೊರಗೆ ಇಳಿಚಾಚಿದ ನಾಲಗೆಯು ಮಹಾವ್ಯಾಳದ ಜಿಹ್ವೆಯಂತಿತ್ತು. ಘೋರವಾದ ನಾಸಾಪುಟಗಳು ಪರ್ವತದ ಮಹಾಕಂದರಗಳನ್ನು ಹೋಲು ವಂತಿರುವುದಾದರೆ, ದೀರ್ಘವಾದ ಕತ್ತು ಮತ್ತು ದಂತಗಳು ದೇಹಕ್ಕೆ ಹೊಂದಿ ಕೊಂಡಂತೆ ಕಾಣುತ್ತಿತ್ತು.

ನರಸಿಂಹನ ದೇಹದಮೇಲೆ ಅಲಂಕಾರ ಮಯವಾದ ಆಭರಣಗಳು ಶೋಭಿಸುತ್ತಿದ್ದವು. ಶ್ರೀವತ್ಸ, ಕೌಸ್ತುಭ, ತುಲಸಿಯಮಾಲೆ, ಬಂಗಾರದ ಸರ, ಕಸ್ತೂರಿಯ ಲೇಪನ, ವಜ್ರ - ಕುಂಡಲ - ತೋಳಬಂದಿಗಳು ಶೋಭಾಯಮಾನವಾಗಿದ್ದವು. ವಿಶೇಷವಾಗಿ ಪ್ರಕಾಶಿಸುವ ಕೇಶಸಮೂಹ, ಮದಿಸಿದ ಆನೆಯ ಸೊಂಡಿಲಿನ ಶಾಖೆಗಳನ್ನು ಹೋಲುವ ಕೈಗಳಲ್ಲಿ ನಖ ಮತ್ತು ಇತರ ಆಯುಧಗಳು ತಮ್ಮ ಕಾಂತಿಯನ್ನು ಬೀರುತ್ತಿದ್ದವು.

ಇದನ್ನು ಶ್ರೀಪಾದರಾಜರು ವರ್ಣಿಸುವ ಬಗೆಯು ಹೀಗಿದೆ -

ಮತ್ತಶುಂಡಾಲ ಶುಂಡಪ್ರಕಾಂ
ಡಪ್ರಚಂಡೋಲಸದ್ದೋಹ ಸಾಹಸ್ರದೀ
ಪ್ತಾಯುಧಾಭೋನಖಾನೀಕವುಂ ಚಕ್ರಶಂ
ಖಾದಿ ನಾನಾಯುಧ

- ಈ ರೀತಿಯಾಗಿ ಕೋಟಿಮಾರ್ತಾಂಡ ತೇಜಸ್ಸಿನ ಹೊಳಪಿನಿಂದ ಕೂಡಿದ ಜ್ವಾಲಾನರಸಿಂಹಾಕೃತಿಯ ದರ್ಶನವಾಗುತ್ತದೆ.

**ದೇಶೀಯ ಭಾಷೆಯ ಸೊಗಡು :**

ಭಾಗವತ ತತ್ತ್ವಪ್ರತಿಪಾದನೆಗೆ ವಿಶೇಷಗಮನವನ್ನು ಕೊಡುವಂತಿರುವ ಶ್ರೀಪಾದರಾಜರ ಕೃತಿಗಳು ಮತ್ತು ಅವರ ಇತರ ಕಾರ್ಯಗಳು ಹದಿನೈದನೆ ಶತಮಾನವನ್ನು 'ಭಾಗವತ ಯುಗ'ವನ್ನಾಗಿಯೇ ಮಾಡಿದೆ. ಈ ಕಾಲದಲ್ಲಿ ಇತರ ವೈದಿಕ ಸಾಹಿತ್ಯವೂ ಹುಲುಸಾಗಿ ಬೆಳೆದಿದೆ. ಕುಮಾರವ್ಯಾಸನಂತಹ ವೈದಿಕಯುಗ ಪ್ರವರ್ತಕ ಕವಿಯನ್ನು ಈ ಕಾಲವು ಕಂಡಿದೆ. ಅಂದಿನ ಯತಿಪರಂಪರೆಗೆ ಸೇರಿದ ಕೆಲವರಿಗಾದರೂ ಸಂಸ್ಕೃತ ಮೂಲದ ಕೃತಿಗಳನ್ನು ದೇಶೀಯ ಭಾಷಾ ಸಾಹಿತ್ಯದಲ್ಲಿ ಹೊರ ತರಬೇಕೆಂಬ ಹಂಬಲವಿತ್ತು. ಇದಕ್ಕೆ ಶ್ರೀಪಾದರಾಜರ ಕೃತಿಯೇ ನಿದರ್ಶನ ವಾಗಿದೆಯೆಂದು ಹೇಳಬಹುದು. ಇಂತಹ ಪ್ರಬಲವಾದ ಹಿನ್ನೆಲೆಯಲ್ಲಿಯೇ ಶ್ರೀಪಾದ ರಾಜರು ಸಂಸ್ಕೃತಭಾಗವತದಲ್ಲಿನ ಸ್ವಾರಸ್ಯವಾದ 'ನರಸಿಂಹ ಪ್ರಾದುರ್ಭಾವ'ವನ್ನು ಕನ್ನಡಕ್ಕೆ ರೂಪಾಂತರಗೊಳಿಸಿ ಭಾಗವತ ನಿಷ್ಠೆಯೊಂದಿಗ ದೇಶೀಭಾಷೆಯ ಅಭಿಮಾನ ವನ್ನು ಹೊರ ಚೆಲ್ಲಿದ್ದಾರೆ. ಮೂಲದ ಧಾಟಿಯನ್ನುಮತ್ತು ಅದರ ಪ್ರೌಢಿಮೆಯನ್ನು ಸಾರ್ಥಕವಾಗುವಂತೆ ತಮ್ಮ ಕೃತಿಯ ಮೂಲಕ ಹೊರತರಬೇಕೆಂಬ ಆಕಾಂಕ್ಷೆಗೆ ಇಲ್ಲಿ ಒದಗಿಬಂದಿರುವ ಫಲಶ್ರುತಿಯೇ ಪ್ರಮಾಣ ವೆಂದು ಹೇಳಬಹುದು.



ನರಸಿಂಹನ ನಖ-ಶಿಖಾಂತವಾದ ರೂಪವರ್ಣನೆಯಲ್ಲಿ ಭಾಗವತದ ದಟ್ಟವಾದ ಛಳಕನ್ನು ಕಾಣಬಹುದು. ಶ್ರೀಪಾದರಾಯರ ಶೈಲಿಯಲ್ಲಿ ಕ್ರಿಯಾತ್ಮಕತೆಗೆ ಕನ್ನಡಿ ಹಿಡಿದಂತಿರುವ ಥಟಾಥಟ್, ಫಳ್‌ಫಳನೆ, ಫಟಾಫಟ್, ಛಿಟಾಛಿಟ್ ಮೊದಲಾದ ಅನುಕರಣ ಶಬ್ದಗಳ ಒಡನಾಟವಿದೆ. ಕವಿಯ ಅಂತರಂಗಿಕ ಪ್ರತಿಭಾ ಸಂಪನ್ನತೆಯೂ ಕೃತಿಯಲ್ಲಿ ವ್ಯಕ್ತವಾಗಿದೆ.

ಜ್ವಾಲಾನರಸಿಂಹನ ರೂಪವನ್ನು ಕಂಡ ದೈತ್ಯನಿಗೆ ತಾನು ಪುತ್ರ ಸಂಹಾರಕ್ಕಾಗಿ ಬಯಸಿದರೆ, ಈ ಮಹಾರೂಪವು ತನ್ನ ಸಂಹಾರಕ್ಕಾಗಿಯೇ ಬಂದಂತೆ ಭಾಸವಾಗುತ್ತದೆ. ಆವನಲ್ಲಿ ಮಹಾರೋಷವು ಮನೆಮಾಡಿ ಯುದ್ಧದಂತಹ ಪ್ರತಿಭಟನೆಯನ್ನೊಡ್ಡುತ್ತದೆ. ಗದಾದಂಡವನ್ನು ಹಿಡಿದು ಸಮರೋದ್ಯುಕ್ತನಾದ ದಾನವನನ್ನು ರೋಷೋಜ್ವಲವಾದ ಜ್ವಾಲೆಗಳು ಹೊರಸೂಸುವಂತೆಯೂ, ದೀರ್ಘವಾದ ನಾಲಗೆಯನ್ನು ಹೊರಗೆ ಚಾಚಿದಂತೆಯೂ ಅಟ್ಟಹಾಸದಿಂದ ಕೂಡಿ ಕೋಟಿಸೂರ್ಯರ ಪ್ರಕಾಶವನ್ನು ಬೀರುತ್ತಿದ್ದ ನರಸಿಂಹನು ಹಿಡಿದುಕೊಳ್ಳುತ್ತಾನೆ. ಅವನನ್ನು ಹಿಡಿದ ನೆಂಬಪ್ಪರಲ್ಲಿಯೇ ದೈತ್ಯನು ಚಾಣಾಕ್ಷತನದಿಂದ ನುಸುಳಿಕೊಂಡು ಬಿಡುತ್ತಾನೆ. ದೈತ್ಯ ರಾಜೇಂದ್ರನು ಸಿಕ್ಕದೇ ಸುಕ್ಕದೇ ಪಕ್ಕನೇ ಬಿಡಿಸಿಕೊಳ್ಳುತ್ತಾನೆ.

ದಾನವನ ವಧೆಯ ಸಮಯವನ್ನು ನಿರೀಕ್ಷಿಸುತ್ತ ಅವನ ಸಂಹಾರಕಾರ್ಯವನ್ನು ವೀಕ್ಷಿಸುತ್ತಿದ್ದ ದೇವತೆಗಳಿಗೆ ನರಸಿಂಹನು ರಾಕ್ಷಸನನ್ನು ಬಿಟ್ಟುಬಿಟ್ಟಿದ್ದು ಚಿಂತೆಗೆ ಎಡೆಮಾಡುತ್ತದೆ. ದಾನವನ ಅಂತ್ಯವಾಗುವುದೊ ಇಲ್ಲವೊ ಎಂಬ ಅನುಮಾನವುಂಟಾಗುತ್ತದೆ. ದುಷ್ಟದೈತ್ಯನನ್ನು ಈತನು ಗೆಲ್ಲನೊ ಗೆಲ್ಲಲಾರನೊ ಎಂದು ತಿಳಿಯದೆ ಅವರು ಚಿಂತಾಕ್ರಾಂತ ರಾಗುತ್ತಾರೆ.

**ಕಾದಾಟದ ವೈಖರಿ :**

ದೈತ್ಯನಾದ ಹಿರಣ್ಯಕಶಿಪು ತನ್ನ ಢಾಲ್, ಕತ್ತಿಯನ್ನೆತ್ತಿಕೊಂಡು ನರಸಿಂಹನ ಮೇಲೆ ಹೋರಾಟ ನಡೆಸುತ್ತಾನೆ. ಈ ರೀತಿಯ ಹೋರಾಟವನ್ನು ಅನೇಕ ಕೃತಿಗಳು ವರ್ಣಿಸುತ್ತಿವೆ. ಇದೂ ಅಲ್ಲದೆ ಹಿರಣ್ಯಕಶಿಪು - ನರಸಿಂಹರ ಹೋರಾಟಚಿತ್ರಗಳನ್ನು ಹಲವಾರು ಶಿಲ್ಪಗಳ ಮೂಲಕ ನಾವಿಂದು ಕಾಣುತ್ತಿದ್ದೇವೆ. ಇವುಗಳಲ್ಲಿ ನಾಮಕ್ಕಲ್, ತಿರುಪತಿ, ಎಲ್ಲೋರಾ, ಪಟ್ಟದಕಲ್‌ಗಳಲ್ಲಿನ ಕೆಲವು ದೇವಾಲಯದ ಶಿಲ್ಪಗಳು ಗಮನಾರ್ಹವಾಗಿವೆ. ಇಷ್ಟಲ್ಲದೆ ಅನೇಕ ದೇವಾಲಯಗಳಲ್ಲಿನ ಕಂಬಶಿಲ್ಪಗಳು ಈ ದೃಶ್ಯಗಳನ್ನು ರೂಪಾದಿಗಳ ಮೂಲಕ ಸೆರೆಹಿಡಿದು ಕೊಟ್ಟಿವೆ.

ನರಸಿಂಹ ಮತ್ತು ಹಿರಣ್ಯಕಶಿಪು ಇವರೀರ್ವರ ಕಾದಾಟದ ಕಾವು ಏರಿದಂತೆ ಪರಾಕ್ರಮಾಟ್ಟಹಾಸಗಳು ತೀವ್ರಗೊಳ್ಳುತ್ತವೆ. 'ಜಂಘಾಲ ಲೀಲಾ ಸಮುಲ್ಲಂಘನಾಟೋಪದಿಂ' ಹರಿ ನಾರಹರ್ಯಾಕ್ಷನು ದೈತ್ಯದಕ್ಷನನ್ನು ಮತ್ತೊಮ್ಮೆ ಹಿಡಿದಿದ್ದಾನೆ. ತನ್ನ ಅಂಗೈಯಿಂದ ಥಟಾಥಟನೆ ಬಡಿಯುತ್ತಾನೆ. ಪದಾಘಾತದಿಂದ ಅವನನ್ನು ಕೆಳಕ್ಕೆ ಬೀಳಿಸಿದ್ದಾನೆ. ತನ ಕಾಲಿನಿಂದ ಹಿರಣ್ಯಕಶಿಪುವನ್ನು ಪಟ್ಟುಹಾಕಿ ಹಿಡಿದಂತಿರುವ ದೃಶ್ಯವನ್ನು ಕಾಣುವಂತಾಗುತ್ತದೆ. ಸಭಾಭವನದ ದ್ವಾರದವರೆಗೆ ಎಳೆದುಕೊಂಡು ಹೋಗಿ ಹೊಸ್ತಿಲಮೇಲೆ ಹಾಕಿ ತನ್ನ ಹರಿತವಾದ ನಖಶ್ರೇಣಿಯಿಂದ ಸೀಳಿಹಾಕಿದ್ದಾನೆ.

**ದುಷ್ಟಸಂಹಾರದ ಪರಿ :**

ಕಾಲಾಹಿಯಂ ಸೀಳುವೋ ರೀತಿ ಜಂ
ಭಾರಿ ದಂಭೋಳಿಯಂತಾಗಲುಂ ಸೀಳುತಿ
ರ್ದಾ ಮಹಾದೇವನ್ನಾಹಗಲ್ ರಾತ್ರಿಯೊಂ
ದಿಲ್ಲದ್ದಾಗೇ ದಿವಾಸಂಧಿಯಲ್ ಸೀಳಿದಂ

ರಾಕ್ಷಸ ಶ್ರೇಷ್ಠನನ್ನು ಹಿಡಿದ ಮಹಾಸ್ವಾಮಿಯು ಅವನ ವಕ್ಷಸ್ಥಳವನ್ನು ಬಗೆದು ಅದನ್ನು ಕಾಸಾರ ಮಾಡಿದನಂತೆ. ರಕ್ತದೊಂತೊಪ್ಪುವ ತಪಸ್ಸಾರವನ್ನು ವಿಶೇಷವಾಗಿ ಹೀರಿದನಂತೆ. ರಕ್ತವನ್ನು ತನ್ನ ಬೊಗಸೆಗಳಲ್ಲಿ ತುಂಬಿ ಬೇತಾಳ ಭೂತಾಳಗಳಿಗೆ ಚೆಲ್ಲಿದನಂತೆ. ಮದಿಸಿದ ಆನೆಯ ಸಂಹಾರದಿಂದ ಸಿಂಹವು ಹೇಗೆ ಕ್ರೀಡಿಸಬಹುದೋ ಹಾಗೆ ಕ್ರೀಡಿಸಿದನಂತೆ. ರಕ್ಕಸನ ಕರುಳ ಮಾಲೆಗಳನ್ನು ಕಿತ್ತು ತನ್ನ ಕೊರಳಿನಲ್ಲಿ ಧರಿಸಿದ ಸಮಯದಲ್ಲಿ ಆತನ ರಕ್ತಸಿಕ್ತವಾದ ಕೇಸರಗಳು ಪ್ರಜ್ವಲಿಸುತ್ತಿದ್ದವಂತೆ. ದೈತ್ಯರಾಜೇಂದ್ರನ ಪ್ರಾಣಹರಣ ಮಾಡಿದ ನರಹರಿಯು ಅವನ ಬಂಧುಗಳನ್ನು ಉಲ್ಲೋಲಕಲ್ಲೋಲ ಗೊಳಿಸುತ್ತಾನೆ.

ನರಸಿಂಹನು ದುಷ್ಟರಾಕ್ಷಸನನ್ನು ಮತ್ತು ಅವನ ಪರಿವಾರದವರನ್ನು ಸಂಹಾರ ಮಾಡಿದ ಸಂದರ್ಭದಲ್ಲಿ ಮಹಾಪ್ರಳಯದ ಘಟನೆಗಳು ಸಂಭವಿಸುತ್ತವೆ. ಸೂರ್ಯಚಂದ್ರರು ನಿಸ್ತೇಜರಾಗುತ್ತಾರೆ. ಸಮುದ್ರಗಳು ಸಂಕ್ಷೋಭೆಗೊಳ್ಳುತ್ತವೆ. ಆತನ ಪಾದ ಸಂಘಟ್ಟದಿಂದ ಧರಾಚಕ್ರವು ಅಲುಗಾಡುತ್ತದೆ. ಶಾಕಿನೀ ಢಾಕಿನೀ ಮುಂತಾದ ದುಷ್ಟಗ್ರಹ ಸಮೂಹವೆಲ್ಲವೂ ಭೀತಿಯಿಂದ ಓಡುತ್ತವೆ. ಇದೆಲ್ಲ ತೀರಿದ ಬಳಿಕ ಆ ನರಸಿಂಹಸ್ವಾಮಿಯು ಸಿಂಹಾಸನದ ಮೇಲೆ ಕುಳಿತುಬಿಡುತ್ತಾನೆ.

ಶ್ರೀಪಾದರಾಜರ ದಂಡಕದ ಅರ್ಧಕ್ಕಿಂತ ಹೆಚ್ಚಾದ ಭಾಗವು ನರಸಿಂಹಾವತಾರಕ್ಕೆ ಮತ್ತು ದೈತ್ಯನ ಸಂಹಾರಕ್ರಿಯೆಗೆ ಸಂಬಂಧಪಟ್ಟಿರುತ್ತದೆ. ಇದರ ಉಳಿದ ಭಾಗದಲ್ಲಿ ಅವತಾರದ ಉಪಸಂಹಾರವನ್ನು ಹೇಳಲಾಗಿದೆ. ಇದರಲ್ಲಿ ಸ್ತೋತ್ರಭಾಗವೂ ಇದೆ. ಹಿರಣ್ಯಕಶಿಪುವಿನ ವಧೆಯಾದ ನಂತರ ಅಲ್ಲಿಗೆ ಬ್ರಹ್ಮ - ರುದ್ರಾದಿಗಳು, ದೇವ - ಪಿತೃಗಣದವರು ಯಕ್ಷ-ಗಂಧರ್ವರು ಭಗವಂತನ ಪಾರ್ಷದವರೆಲ್ಲ ಬರುತ್ತಾರೆ. ಅವರೆಲ್ಲರೂ ತಮ್ಮ ತಲೆಯ ಮೇಲೆ ಕರಗಳನ್ನು ಜೋಡಿಸಿಕೊಂಡು ಸಿಂಹಾಸನದ ಮೇಲೆ ಬೆಳಗುತ್ತಿದ್ದ ಮಹಾ ತೇಜೋಮೂರ್ತಿಯಾದ ನರಸಿಂಹ ದೇವನಿಗೆ ದೂರದಲ್ಲಿ ನಿಲ್ಲುತ್ತಾರೆ. ಅವರಾರಿಗೂ ಭಗವಂತನ ಸನಿಹಕ್ಕೆ ಹೋಗಲು ಧೈರ್ಯ ಸಾಲದಾಗಿದೆ. ಹೀಗಾಗಿ ಅವರು ದೂರದಲ್ಲಿ ನಿಂತು ಭಯದಿಂದಲೂ, ಗೌರವದಿಂದಲೂ ಆತನನ್ನು ಸ್ತುತಿಸುತ್ತಿದ್ದಾರೆ.

**ಸ್ತೋತ್ರ ವಿವರ :**

ಬ್ರಹ್ಮಾದಿಗಳು ಒಬ್ಬೊಬ್ಬರು ಸಹ ಆತನನ್ನು ಕುರಿತು ಮಾಡಿದ ಸ್ತುತಿಯು ಮೂಲಭಾಗದಲ್ಲಿ ಕಠಿಣವಾಗಿದೆ. ಇದನ್ನು ಕನ್ನಡ ಭಾಷೆಯಲ್ಲಿ ತಂದುಕೊಡುವುದು ದುಸ್ತರವಾದ ಕಾರ್ಯವೇ ಆಗಿದೆ. ಶ್ರೀಪಾದರಾಜರು ಇದನ್ನು ಕನ್ನಡಭಾಷೆಗೆ ಹೊಂದಿಸಿ ವ್ಯವಹಾರಿಕವಾದ ರೀತಿಯಲ್ಲಿ ನಮಗೆ ನೀಡಿದ್ದಾರೆ. ಇಲ್ಲಿ ಕೃತಿಕಾರರ ನಿರ್ಗಳವಾದ ಶೈಲಿಯನ್ನೂ, ಅದರ ಆಹ್ಲಾದಗುಣವನ್ನೂ ಕಾಣಬಹುದಾಗಿದೆ.

ಬ್ರಹ್ಮದೇವನು ಮಾಡಿದ ಸ್ತೋತ್ರದ ಅನುವಾದ ಭಾಗದಲ್ಲಿ ದೇಸಿಯ ಲಕ್ಷಣವಿದೆ. ಆತನು ನರಸಿಂಹನ ಕೋಪವನ್ನು ಉಪಶಮನಗೊಳಿಸುವಂತೆ ಲಕ್ಷ್ಮೀದೇವಿಯನ್ನು ಕೇಳಿದ ಮಾತುಗಳಲ್ಲಿ ಕನ್ನಡ ಭಾಷೆಯ ಸೊಗಡನ್ನು ನೋಡಬಹುದು. ಲಕ್ಷ್ಮೀದೇವಿಯು ನರಸಿಂಹನನ್ನು ಪ್ರಾರ್ಥಿಸಿಕೊಂಡ ವಿಧಾನದಲ್ಲಿ ನವೀನತೆಯಿದೆ. ಇದು ದಂಡಕದ ಸುಂದರವಾದ ಭಾಗವೂ ಹೌದು.

ಇದನ್ನು ರಚಿಸುವಲ್ಲಿ ಶ್ರೀಪಾದರಾಜರು ತಮಗೆ ಕನ್ನಡಭಾಷೆಯ ಬಗೆಗಿದ್ದ ಅಭಿಮಾನ ಅಂತಃಕರಣಗಳನ್ನು ತೋರ್ಪಡಿಸಿದ್ದಾರೆ.

ಲಕ್ಷ್ಮೀದೇವಿಯು ನರಸಿಂಹನ ಉಗ್ರಸ್ವಭಾವವನ್ನು ಉಪಸಂಹರಿಸುವ ಮುನ್ನ ಆಕೆಯು ಕಂಡ ಆತನ ಸ್ವರೂಪದ ಚಿತ್ರಣ ಹೀಗಿದೆ-

ಉಗ್ರನಂತಿಪ್ಪ ನೃಸಿಂಹ ಮೂರ್ತ್ಯುಗ್ರಮಂ
ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ
ದಕ್ಕೆ ಬಂದಳಮ್ಮಮ್ಮ ಎಂ ಗುಮ್ಮನಂ
ತಿಪ್ಪನೇ ಸ್ವಾಮಿ ಮುನ್ನಿಂತು ಆಶ್ಚರ್ಯವಂ
ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ
ಕಂಡಿಲ್ಲವಲ್ಲಾ

- ಎಂದು ಆಶ್ಚರ್ಯಚಕಿತಳಾಗಿದ್ದಾಳೆ.

ಈ ರೀತಿಯಿಂ ಸಪ್ತಮಸ್ಕಂಧದೊಳಷ್ಟಮಾ
ಧ್ಯಾಯ ಸಂಶ್ಲೋಕಿಗಳ್ ನಾಕಿಗಳ್ ಬ್ರಹ್ಮರು
ದ್ರಾದಿಕಾನೇಕಳ್ ನಾರಸಿಂಹನ್ನಸು
ಸ್ತೋತ್ರಮಂ ಮಾಡಿ

- ಎಂಬ ಈ ಸಾಲುಗಳಲ್ಲಿ ತಿಳಿಸಿರುವ ಹಾಗೆ ಈ ದಂಡಕದ ಉತ್ತರ ಭಾಗದಲ್ಲಿ ಅವರ ಪ್ರಾರ್ಥನೆ ಮತ್ತು ಭಗವಂತನಿಗೆ ಸಲ್ಲಿಸಿದ ನಮನಗಳು ಅಡಕವಾಗಿದೆ.

ಪ್ರಹ್ಲಾದನದು ಕಡೆಯ ಸರದಿಯಾಗಿದೆ. ಬ್ರಹ್ಮನು ತಿಳಿಸಿದ ಹಾಗೆ ಆ ಪಿಳ್ಳೆ ಪ್ರಹ್ಲಾದನು ನರಸಿಂಹನ ಸನಿಹಕ್ಕೆ ಹೋಗಿ ಭಕ್ತಿಯಿಂದ ಸಾಷ್ಟಾಂಗ ಬಿದ್ದು ತನ್ನ ಪ್ರಣಾಮುಗಳನ್ನು ಸಲ್ಲಿಸುತ್ತಾನೆ. ಚಕ್ರಶಂಖಾಂಕಿತನಾದ ಸ್ವಾಮಿಯು ತನ್ನ ಮಂಗಳಕರವಾದ ಬಾಹುಗಳಿಂದ ತನ್ನ ಪ್ರಿಯಭಕ್ತನನ್ನು ಎತ್ತಿಕೊಳ್ಳುತ್ತಾನೆ. ಅವನ



ಮಸ್ತಕದ ಮೇಲೆ ತನ್ನ ಹಸ್ತವನ್ನಿಡುತ್ತಾನೆ. ಅಶ್ರುನೇತ್ರಾಬ್ಜನಾಗಿದ್ದ ಅವನು ನರಸಿಂಹನನ್ನು ಸ್ತೋತ್ರಮಾಡುತ್ತಾನೆ. ಶ್ರೀರಮಾದೇವಿಯೂ ಸಹ ತನ್ನ ಸಂಮೋಹಿನೀ ಸಂಪುಗಳಿಂದ ಕೂಡಿ ಬಂದು ಆತನ ಅಂಕವನ್ನು ಅಲಂಕರಿಸುತ್ತಾಳೆ.

ಶ್ರೀ ಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕದ ಕೊನೆಯ ಭಾಗ ಪೂಜಾದಿಗಳ ಚಿತ್ರಣದಿಂದ ಕೂಡಿದ್ದು, ಆತನಿಗೆ ತೊಡಿಸಿದ ಅನರ್ಘ್ಯ ರತ್ನಾಭರಣ, ಚೀನಿ ಚೀನಾಂಬರಗಳು, ಹಾರಗಳು, ಗಂಧ - ಕಸ್ತೂರಿಗಳ ಸುವಾಸನೆ, ಶಾಮಂತಿಕಾ ತುಂಗ ಮಂದಾರವಿಂದಾದಿಗಳ ಪರಿಮಳವಿದೆ. ಈ ಭಾಗವು ಯಾರಿಂದ ಯಾರಿಗೆ ಹೇಳಿದ್ದೆಂಬ ವಿವರವಿದೆ.

ಈ ಕಥಾದಂಡಕವನ್ನು ನಿತ್ಯ ಪಾರಾಯಣ ಮಾಡುತ್ತ ಕೊಂಡಾಡುತ್ತ ಭಜಿಸುವ ಸಾಧು ಸಂತಾನಕೆ ಪಾಪಗಳು ಲೋಪವಾಗುವುದೆಂಬ ಫಲಶ್ರುತಿಯನ್ನು ಕೂಡಾ ಹೇಳಲಾಗಿದೆ. ಶ್ರೀಪಾದರಾಜರ 'ರಂಗವಿಠ್ಠಲ' ಎಂಬ ಅಂಕಿತವನ್ನು ದಂಡಕದ ಕಡೆಯಲ್ಲಿ ನಮೂದಿಸಲಾಗಿದೆ.

ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ ದ್ವೈತ ಸಿದ್ಧಾಂತದಂತಹ ಪ್ರಮುಖ ತತ್ತ್ವಗಳನು ಪರಿಚಯ ಮಾಡಿಕೊಟ್ಟಿದ್ದಾರೆ. ಇದರಲ್ಲಿ ರಸಾನುಭಾವದ ಸವಿಯನ್ನು ಕಾಣುವ ಹಾಗೆ ಹರಿ ಸರ್ವೋತ್ತಮ ತತ್ತ್ವವನ್ನು ಕೂಡಾ ಕಾಣಬಹುದು. ಇವರ ಕೃತಿಗಳಲ್ಲಿ ಸಂಭಾಷಣಾ ಸಂವಿಧಾನತೆಯು ಸರಳವೂ, ಸಹಜವೂ ಆಗಿ ಕಂಡುಬಂದಿರುವುದಕ್ಕೆ ಶ್ರೀಲಕ್ಷ್ಮೀನರಸಿಂಹ ದಂಡಕವು ಉತ್ತಮ ನಿದರ್ಶನವಾಗಿದೆ. ಶ್ರೀಪಾದರಾಜರ ರಚನೆಗಳಲ್ಲಿ ಉತ್ತಮ ವಾದ ಭಾವಗೀತೆಗಳ ಸವಿಯೂ ಅಡಕವಾಗಿದೆ. ಶ್ರೀಪಾದರಾಜರು ಭಕ್ತರ ಆಸೆ ಆಕಾಂಕ್ಷೆಗಳನ್ನು ಅವನ ಆತುರ - ಅಡಕವಾಗಿದೆ. ಶ್ರೀಪಾದರಾಜರು ಭಕ್ತರ ಆಸೆ ಆಕಾಂಕ್ಷೆಗಳನ್ನು ಅವನ ಆತುರ - ಆತಂಕಗಳನ್ನು ತುಂಬಾ ಸೊಗಸಾಗಿ ಬಣ್ಣಿಸಬಲ್ಲರು ಎಂಬುದಕ್ಕೆ ಅವರ ಈ ಕೃತಿಯು ಸಾಕ್ಷಿಯಾಗಿ ನಿಂತಿದೆ.

ಶ್ರೀಪಾದರಾಜರು ವಿಜಯನಗರ ಸಾಮ್ರಾಜ್ಯದ ಅರಸರು, ಅದರಲ್ಲಿಯೂ ಸಾಳುವ ನರಸಿಂಹನೊಂದಿಗೆ ಅವರ ಮೇಲೆ ಪ್ರಭಾವ ಬೀರಬಲ್ಲಷ್ಟು ನಿಕಟವಾದ ಒಡನಾಟವನ್ನು ಹೊಂದಿದ್ದುದು ಕರ್ನಾಟಕದ ಇತಿಹಾಸದಲ್ಲಿ ಸ್ಮರಣೀಯವಾಗುಳಿದಿದೆ. ಧಾರ್ಮಿಕ ಪ್ರಭಾವಲಯದಲ್ಲಿನ ರೀತಿಯಂತೆ ಕನ್ನಡ ಸಾರಸ್ವತ ಲೋಕಗಲ್ಲಿಯೂ ಭಾಗವತ ಸಾಹಿತ್ಯದ ಹೊಳಹುಗಳನ್ನು ಪರಿಪೂರ್ಣವಾದ ರೀತಿಯಲ್ಲಿ ಪರಿಚಯಿಸುವುದರ ಮೂಲಕ ಶ್ರೀಪಾದ ರಾಜರು ಧ್ರುವತಾರೆಯಾಗಿ ಬೆಳಗುತ್ತಿದ್ದಾರೆ ಎಂದು ಹೇಳಿದರೆ ಅದು ಅತಿಶಯೋಕ್ತಿ ಯಾಗಲಾರದು.

★★★★★



# ಸಾಲಗ್ರಾಮ ವಿಚಾರ

- ಪ್ರೊ॥ ಸಿ. ಗೋವಿಂದಾಚಾರ್.

ಸೌಲಭ್ಯ ಭಗವಂತನ ಅತಿಶಯ ಗುಣವಾಗಿದೆ. ಆಶ್ರಿತರಿಗೆ ಅವನು ಎಂದೆಂದೂ ಸುಲಭನು. ಚೇತನೋದ್ಧಾರಕ್ಕಾಗಿ ವ್ಯೂಹ ಪಂಚಕಗಳಲ್ಲಿರುವನು. ಆದರೆ ಪರ, ವ್ಯೂಹ, ಹಾರ್ದ, ವಿಭವ, ರೂಪಗಳಲ್ಲಿ ಅವನನ್ನು ನೋಡುವುದು, ಸಮೀಪಿಸುವುದು, ತಿಳಿಯುವುದು ಅಸಾಧ್ಯವಾದುದು. ಈ ಕಲಿಯುಗದಲ್ಲಿ ಭಗವಂತನ ಅರ್ಚಾರೂಪವೇ ಎಲ್ಲರಿಗೂ ಎಟುಕುವಂಥಾದ್ದು. ಅರ್ಚೆಯಲ್ಲೇ ಸಾಲಗ್ರಾಮ ರೂಪದಲ್ಲಿ ಪ್ರಕಟಗೊಂಡಿದ್ದಾನೆ.

ಅರ್ಥವಿವರಣೆ : ಸಾಲಗ್ರಾಮ ಎ) ದಿವ್ಯಕ್ಷೇತ್ರದ ಹೆಸರು, ಬಿ) ಪೂಜಾವಸ್ತು.

ದಿವ್ಯಕ್ಷೇತ್ರ : ದಕ್ಷಿಣ ಹಿಮಾಲಯದಲ್ಲಿ ಅನ್ನಪೂರ್ಣ - ಧವಳಗಿರಿ ಪ್ರದೇಶದ ಮಧ್ಯೆ ಇರುವ ಕಾಳಿಗಂಡಕಿನದಿ ಪ್ರದೇಶದ 12 ಯೋಜನ ವಿಸ್ತೀರ್ಣ ಉಳ್ಳ ಪವಿತ್ರ ಪ್ರದೇಶವೇ ಸಾಲಗ್ರಾಮ ಕ್ಷೇತ್ರ. ಗಂಡಕೀ ನದಿಯ ಉತ್ತರತೀರದಲ್ಲಿ ವಿಷ್ಣುವಿನ ಸಾನ್ನಿಧ್ಯವಿರುವ ಪ್ರದೇಶವು ಸಾಲಗಿರಿ ಎಂದು ಕರೆಯಲ್ಪಟ್ಟಿದೆ. ಇದು ಮುಕ್ತಿಧಾಮ ಎಂಬ ಕ್ಷೇತ್ರದೊಂದಿಗೆ ಕೊನೆಗೊಳ್ಳುವುದು. ಇದನ್ನು ಮುಕ್ತಿಕ್ಷೇತ್ರ ಎಂದೂ ಕರೆಯುವರು. ಗಂಡಕಿನದಿ ಪ್ರದೇಶದಲ್ಲಿ ಹರಿಯುವ ನದಿ, ಉಪನದಿ, ಸರೋವರ, ಕೊಳ, ಚಿಲುಮೆಗಳು ಹಾಗೂ ಮುಕ್ತಿನಾಥ ದೇವಸ್ಥಾನ - ಇವೆಲ್ಲವೂ ಸೇರಿ ಸಾಲಗ್ರಾಮ ಕ್ಷೇತ್ರ ಎಂದೆನಿಸಿಕೊಳ್ಳುವುದು.

ಗಂಡಕ್ಯಾಃ ಉತ್ತರೇ ತೀರೇ  
ಗಿರಿರಾಜಸ್ಯ ದಕ್ಷಿಣೇ  
ಕ್ಷೇತ್ರಂ ತು ವಿಷ್ಣುಸಾನ್ನಿಧ್ಯಾತ್  
ಸರ್ವಕ್ಷೇತ್ರೋತ್ತಮೋತ್ತಮಂ

ವೇದಾಂತದೇಶಿಕರು ಪಾದುಕಾ ಸಹಸ್ರದಲ್ಲಿ ಮುಕ್ತಿಕ್ಷೇತ್ರವನ್ನು ಉಲ್ಲೇಖಿಸಿದ್ದಾರೆ. ''ಪಾದುಕೆಯೇ ಮುನಿಪ್ರೋಕ್ತವಾದ ಸಾಲಗ್ರಾಮಕ್ಷೇತ್ರ, ಪಾದುಕೆಯಲ್ಲಿರುವ ಇಂದ್ರನೀಲಮಣಿಗಳೇ ಗಂಡಕಿ ನದಿಯಲ್ಲಿ ವಾಸಮಾಡುವ ಸಾಲಗ್ರಾಮ ಶಿಲೆಗಳು. ಆದ್ದರಿಂದ ಅಯೋಧ್ಯಾ ಮುಂತಾದ ಕ್ಷೇತ್ರಗಳಿಗಿಂತ ಇದು ಸರ್ವೋತ್ತಮವಾದುದು''

- ಇಂದ್ರನೀಲ ಪದ್ಧತಿ 704.

ಸಾಲಗ್ರಾಮ ಕ್ಷಿತಿರಿವ  
ಶುಭೈಶಾರ್ಙ್ಗಿಣೋ ರೂಪ ಭೇದೈ  
ಸಾಕೇತಾದೇಃ ಸಮಧಿಕ ಗುಣಾಂ  
ಸಂಪದಂ ದರ್ಶಯಂತೀ  
ಮುಕ್ತಿಕ್ಷೇತ್ರಂ ಮುನಿಭಿರಖಿಲೈ  
ಗೀಯಸೇ ಪಾದುಕೇ ತ್ವಂ



ವಾಮನ ಸಾಲಗ್ರಾಮ

ಈ ಪವಿತ್ರನದಿ ಪ್ರದೇಶದಲ್ಲಿ ಪುಲಹ ಆಶ್ರಮ ಒಂದಿದೆ. ಬ್ರಹ್ಮ ಸೃಷ್ಟಿಸಿದ ಚಕ್ರತೀರ್ಥವಿದೆ. ಇದರ ಉತ್ತರ ಭಾಗದ ಬಂಡೆಗಲ್ಲಿನ ಪ್ರದೇಶವೆಲ್ಲ ಭಕ್ತರ ಪ್ರಣ್ಯ ಧಾಮವೇ ಆಗಿದೆ. ಮುಕ್ತಿ ನಾಥನ ದೇವಸ್ಥಾನದಿಂದ ದಾಮೋದರ ಕುಂಡ್ ಎಂಬ ಸರೋವರ ಸಿಗುವುದು.

ಭಗವಂತ ಮತ್ತು ತುಳಸಿ ಸಂವಾದರೂಪದ ಕೃತಿಯಾದ 'ತುಳಸ್ಯುಪಾಖ್ಯಾನ' ಹೇಳುವುದು.

ಎ) ತುಳಸಿ! ನೀನು ಗಂಡಕಿ ನದಿಯಾಗಿ ಹುಟ್ಟಿ - ಅದು ಹರಿದಸ್ಥಳವೆಲ್ಲಾ ಪವಿತ್ರ ಪ್ರದೇಶವಾಗಲಿ. ಭರತಖಂಡದ ನಿವಾಸಿಗಳಿಗೆ ಪುಣ್ಯ ಪ್ರಾಪ್ತವಾಗಲಿ.

ಇಯಂ ತನುರ್ನದೀರೂಪಾ  
ಗಂಡಕೀತಿ ಚ ವಿಶ್ರುತಾ  
ಪೂತಾ ಸು ಪುಣ್ಯ ದಾನ್ನಣಾಂ  
ಪುಣ್ಯೇ ಭವತು ಭಾರತೇ

- X - 30

ಬಿ) ಭರತ ಖಂಡದಲ್ಲಿ ಪುಣ್ಯಕರವಾದ ಗಂಡಕೀ ನದಿಗೆ ಅಭಿಮಾನ ದೇವತೆಯಾಗಿ ನನ್ನ ಅಂಶದಲ್ಲಿ ಲವಣಸಮುದ್ರರಾಜನ ಪತ್ನಿಯಾಗಿ ಜನರಿಗೆ ಪುಣ್ಯಕೊಡುವ ಮಹಿಮೆ ನಿನಗೆ ಲಭಿಸಲಿ -

ನದ್ಯಧಿಷ್ಠಾತೃದೇವೀ  
ಯಾ ಭಾರತೇ ಚ ಸುಪುಣ್ಯದಾ  
ಲವಣೋದಸ್ಯ ಸಾ ಪತ್ನಿ  
ಮದಂಶಸ್ಯ ಭವಿಷ್ಯಸಿ - X - 46

ಸಿ) ನಾನು ನಿನ್ನ ಶಾಪದ ಪ್ರಯುಕ್ತ ಭರತಖಂಡದಲ್ಲಿ ಗಂಡಕೀ ನದಿಯ ತೀರದಲ್ಲಿ ಶಿಲಾರೂಪದಲ್ಲಿರುವೆನು-

ಅಹಂ ಚ ಶೈಲರೂಪೇಣ  
ಗಂಡಕೀ ತೀರ ಸನ್ನಿಧೌ  
ಅಧಿಷ್ಠಾನಾಂ ಕರಿಷ್ಯಾಮಿ  
ಭಾರತೇ ತವ ಶಾಪತಃ - X - 48

ಗೌತಮೀಯ ತಂತ್ರದ ಪ್ರಕಾರ ಗಂಡಕೀ ನದಿ ಬಿಟ್ಟು ಬೇರಾವುದೇ ನದಿಯಲ್ಲಿರುವ ಶಿಲೆ ಸಾಲಗ್ರಾಮವಲ್ಲ. ಗಂಡಕಿ ನದಿ ಸ್ನಾನ ಮಾಡುವುದು ಹಾಗೂ ಮುಕ್ತಿಧಾಮವನ್ನು ತಲಪುವುದು ಹೇಗೆ ?

ದೆಹಲಿ, ಕಾನ್ಪುರ, ಕಾಶಿ ಮತ್ತು ಪಾಟ್ನ ನಗರಗಳಿಂದ ಗೋರಖ್‌ಪುರ ಸೇರಿ ಅನಂತರ ಭಾರತ - ನೇಪಾಳಗಡಿ ಸ್ಥಳಗಳಾದ ಸನೋಲಿ -

ಭೈರಾವ್, ಇಲ್ಲಿಂದ ನೇಪಾಳದ ರಾಜಧಾನಿ ಖಠ್ಮಂಡು, ಅನಂತರ ಪೋಕ್ರನಗರವನ್ನು ತಲುಪಬೇಕು. ಇಲ್ಲಿ ಒಂದು ಸಣ್ಣ ವಿಮಾನ ನಿಲ್ದಾಣ ಹಾಗೂ ಹೆಲಿಪ್ಯಾಡ್ ಇದೆ. ಇಲ್ಲಿಂದ ಜೊಂಸಂ ದ್ವಾರ 18 ಕಿ.ಮೀ. ದೂರದಲ್ಲಿದೆ ಮುಕ್ತಿನಾಥಕ್ಷೇತ್ರ. ಇದು ಮುಸ್ತಾಂಗ್ ಜಿಲ್ಲೆಗೆ ಸೇರಿದೆ. ಜೊಂಸಂ ನಿಂದ ಕುದುರೆ ಮೇಲೆ ಹೋಗುವ ಅವಕಾಶವಿದೆ. ಖಠ್ಮಂಡುವಿನಿಂದ ಮುಕ್ತಿನಾಥ ಗ್ರಾಮಕ್ಕೆ ಬಸ್ ಸೌಕರ್ಯ ಇದೆ. ಇಲ್ಲಿಂದ ಒಂದು ದಿನ ಪೂರ್ತಿ ಸರ್ಕಾರದ ನಿಯಮಾನುಸಾರ ನಡೆದೇ ಹೋಗಬೇಕು. (Trekking) ಖಠ್ಮಂಡು ಪೋಕ್ರ ಮಾರ್ಗದಲ್ಲಿ (ಸುಮಾರು 200 ಕಿ.ಮೀ.) ಕಾಳಿಗಂಡಕೀ ನದಿ ಪ್ರದೇಶವಿದೆ. ಕಡಿದಾದ ಮಾರ್ಗವಾದ್ದರಿಂದ ಸ್ನಾನಕ್ಕೆ ಅವಕಾಶವಿರುವುದಿಲ್ಲ. ಹೆಲಿಪ್ಯಾಡ್ ವ್ಯವಸ್ಥೆ ಇರುವಲ್ಲಿ ಸ್ನಾನ ಮಾಡಬಹುದು. ಈ ಮಾರ್ಗದಲ್ಲೇ ಸ್ವಯಂಭೂನಾಥ್ ಎಂಬ ಬೌದ್ಧರ ಸ್ತೂಪವಿದೆ. ½ ಗಂಟೆ ಅವಧಿಯಲ್ಲಿ ಹೆಲಿಕಾಪ್ಟರ್ 1 ಸಣ್ಣ ವಿಮಾನದಲ್ಲಿ ಮುಕ್ತಿನಾಥ ಕ್ಷೇತ್ರವನ್ನು ತಲುಪಬಹುದು. ಭಾರಿ ಮೋಡ ಸಂಘಟನೆ ಇದ್ದಲ್ಲಿ ವಾಯು ಸಂಚಾರ ಸ್ಥಗಿತಗೊಳ್ಳುವುದು. ಕ್ಷೇತ್ರದ ಮೇಲಿರುವ ಆಕಾಶಪ್ರದೇಶವೇ 'ವಿಮಾನ' ಎಂಬ ಐತಿಹ್ಯ ಹೇಳಲ್ಪಟ್ಟಿದೆ. ಹೆಲಿಪಾಡ್‌ನಿಂದ 100 ಮೆಟ್ಟಿಲುಗಳನ್ನು ಹತ್ತಿದರೆ ಶ್ರೀಮೂರ್ತಿ ದೇವಸ್ಥಾನ ಸಿಗುವುದು. ಇದರ ಪಕ್ಕದಲ್ಲಿ : ಎ) ಚಕ್ರತೀರ್ಥವಿದೆ. ಬಿ) ಭಕ್ತರಿಗೆ 108 ಪವಿತ್ರ ತೀರ್ಥಗಳ ಸ್ನಾನಫಲ ಸಿಗುವ ಉದ್ದೇಶದಿಂದ ಹಸು, ಕುದುರೆ ನವಿಲು, ಜಿಂಕೆ - ಮುಂತಾದ ಪ್ರಾಣಿಗಳ ಮುಖಗಳ ರೂಪದ ವಿಶೇಷವಾದ ನಲ್ಲಿಗಳಿಂದ ತೀರ್ಥ ಬರುವ ವ್ಯವಸ್ಥೆ ಇದು. ಸಿ) ಶಿವಾಲಯ, ಡಿ) ಮಹಾಯಮಾಯಿ ಎಂಬ ಜ್ವಾಲಾಮುಖಿ ಗುಡ್ಡವಿದೆ. ಇ) ಶಿವಾಲಯಕ್ಕೆ ಸೇರಿದಂತೆ ಷಡ್ ರೀತಿಯ ಕಟ್ಟಡ ಹಾಗೂ ಎರಡು ಸಣ್ಣಮನೆಗಳಿವೆ. ಎಫ್) ಇಬ್ಬರು ಸ್ತ್ರೀ ಪೂಜಾರಿಗಳು, ಒಬ್ಬ ಸಾಧು, ಒಬ್ಬ ಯೋಗಿ ಮತ್ತು ಇಬ್ಬರು ಸಿಬ್ಬಂದಿ ವರ್ಗದವರಿದ್ದಾರೆ. ಮಂಗಳಾರತಿ ಆದನಂತರ ಪೂಜಾರಿಗಳು ಭಕ್ತರ ಕೊರಳಿಗೆ ಹಳದಿ ಶೇಷವಸ್ತ್ರವನ್ನು ಕಟ್ಟಿ ಶಠಾರಿ ಇಡುವರು. ಜಿ) ಸನ್ನಿಧಿಯಲ್ಲಿ ಲಕ್ಷ್ಮೀನಾರಾಯಣ ಸಾಲಗ್ರಾಮ ಮೂರ್ತಿ - ಇದನ್ನೇ ಶ್ರೀಮೂರ್ತಿ ಎಂದು ಕರೆಯುವರು. ಲಕ್ಷ್ಮೀ, ಸರಸ್ವತಿ, ದುರ್ಗಾ, ಸಂತೋಷಿಮಾ, ರಾಮಾನುಜ ಹಾಗೂ ವಿವಿಧ ಋಷಿ ಮೂರ್ತಿಗಳಿವೆ.

**ಸ್ಥಳಪುರಾಣ ಶ್ಲೋಕ :**

ಸಾಲಿಗ್ರಾಮ ಧರಾಧರೇ ಶುಭಕರೇ
ಶ್ರೀಚಕ್ರ ತೀರ್ಥಾಶ್ರಯೇ
ಶ್ರೀಮೂರ್ತಿಸ್ಸಕಲ್ಯೈಃ ಸಮರ್ಚಿತ
ಪದದ್ವಂದ್ವ ಪುರಸ್ತಾನ್ಮುಖಿ
ಬ್ರಹ್ಮೇಶಾನ ವರಪ್ರಧಾನ
ಸುಮುಖಿಃ ಶ್ರೀದೇವಿಕಾವಲ್ಲಭ
ಶ್ರೀಮದ್ವ್ಯೋಮ ವಿಮಾನ
ಭೂಷಿತ ತನುರ್ನಾನಾಕೃತೀ ರಾಜತೇ

**ಪೂಜಾವಸ್ತು :**

'ಸಾಲಯ' ಎಂದರೆ ಈಶ್ವರ - ಯಾವನು ಅವತಾರಗಳನ್ನು ಮಾಡಿರುವನೋ, ಯಾವನು ವ್ಯೂಹಪಂಚಕಗಳಲ್ಲಿರುವನೋ ಅವನೇ ಸರ್ವಶಕ್ತನೂ ಸರ್ವೇಶ್ವರನಾದ ಮಹಾವಿಷ್ಣು. ಎಲ್ಲ ಭಕ್ತರು ಅದರಲ್ಲೂ ಗೌಡೀಯ ವೈಷ್ಣವರು ವಿಷ್ಣುವಿನ ಪ್ರತಿರೂಪವೇ ಸಾಲಗ್ರಾಮ ಎಂದು ನಂಬಿರುವರು. 'ಗ್ರಾಮ' ಎಂದರೆ ಸಮೂಹ, ಶಿಲೆಗಳ ಸಮೂಹ, 'ಗ್ರಾಮ' ಎಂದರೆ ಶಿಲೆ ಎಂದೂ ಅರ್ಥವಿದೆ. 'ಸಾಲಿ' ಎಂದರೆ ಶಾಲ ವೃಕ್ಷ ಪ್ರದೇಶ. ಇಲ್ಲಿ ದೊರೆಯುವ ಶಿಲೆಯೇ ಸಾಲಗ್ರಾಮ/ಸಾಲಗ್ರಾವ. ಸಾಲಂಕಾಯನೆಂಬ ಋಷಿ ತಪಸ್ಸು ಮಾಡಿದ್ದರಿಂದ ಈ ಹೆಸರು. ಸಾಲಗಿರಿ, ಗಿರಿರಾಜ ಎಂದರೆ ಸಾಲಗ್ರಾಮ ಶಿಲಾಪರ್ವತ ಎಂದು ಅರ್ಥ. ಮಹಾವಿಷ್ಣುವಿನ ನಿತ್ಯಸಾನ್ನಿಧ್ಯವಿರುವ ಸಹಸ್ರಾರು ಶಿಲೆಗಳ ಸಮೂಹ ಎಂಬುದೆ ಒಟ್ಟಾರೆ ಅರ್ಥ.

ಸಾಲಯಃ ಈಶ್ವರಾಃ
ತೇಶಾಮ್ ಸಾಲೀನಾಂ ಗ್ರಾಮ
ಭೂತೋಯಂ ಪ್ರಸ್ತರಃ
ತಸ್ಮಾತ್ ಸಾಲಿಗ್ರಾಮಃ ಅಥವಾ
ಸಾಲಯಃ ಸುಶಾಃ ಗಣಾಃ
ತೇಶಾಮ್ ಗ್ರಾಮಃ
ತಸ್ಮಾತ್ ಸಾಲಿಗ್ರಾಮಃ
ನಿತ್ಯಂ ಸನ್ನಿಧಿಃ ಏತಾ ಸು
ಪರಸ್ಯ ಪರಮಾತ್ಮನಃ

ಭಗವಂತನ ನಿತ್ಯಸಾನ್ನಿಧ್ಯವಿರುವುದರಿಂದಲೇ ಸಾಲಗ್ರಾಮ ಶಿಲೆಗಳು ಭಗವತ್ಪೂಜಾ ಬಿಂಬಗಳಾಗಿ ಪೂಜಾರ್ಹವಾಗಿವೆ. ಸಾಲಗ್ರಾಮ ಇರುವಸ್ಥಳದಲ್ಲಿಯೇ ಶ್ರೀಹರಿಯು ವಾಸಮಾಡುವನು. ಅಲ್ಲಿಯೇ ಲಕ್ಷ್ಮಿಯು, ಸಮಸ್ತ ಪುಣ್ಯತೀರ್ಥಗಳು, ನೆಲೆಸಿರುವುವು. ಚಕ್ರತೀರ್ಥ ಕನಕತೀರ್ಥ, ಬಿಲಪ್ರದತೀರ್ಥ ವಿಷ್ಣು ಪದತೀರ್ಥ - ಇವೇ ಇಲ್ಲಿರುವ ಪವಿತ್ರವಾದ ತೀರ್ಥಗಳು -

ಸಾಲಗ್ರಾಮ ಶಿಲಾ ಯತ್ರ
ಯತ್ರ ಸನ್ನಿಹಿತೋ ಹರಿಃ
ತತ್ರೈವ ಲಕ್ಷ್ಮೀರ್ವಸತಿ
ಸರ್ವತೀರ್ಥ ಸಮನ್ವಿತಾ

– ತುಲಸ್ಯುಪಾಖ್ಯಾನ - 64

ಸಾಲಗ್ರಾಮ ಶಿಲೆಗಳು ಮಹಾಲಕ್ಷ್ಮಿಯ ನೇತ್ರಗಳಂತೆ ಶೋಭಿಸುವುದು ಎಂದು ದೇಶಿಕರು ಪಾದುಕಾ ಸಹಸ್ರದಲ್ಲಿ ವ್ಯಕ್ತಪಡಿಸಿದ್ದಾರೆ.

ನಿತ್ಯಂ ಲಕ್ಷ್ಮಿ ನಯನ ರುಚಿರೈ
ಶೋಭಿತಾ ಶಕ್ರನೀಲೈ – 704

ಸದಾಕಾಲವು ಮಹಾಲಕ್ಷ್ಮಿಯೊಂದಿಗೆ ನಾನು ಈ ಸಾಲಗ್ರಾಮಗಳಲ್ಲಿ ವಾಸಮಾಡುವೆನು ಎಂದು ವಿಷ್ಣುವು ತುಲಸಿಗೆ ಹೇಳುವನು -

ತಸ್ಯಾಪೇಷ ಸದಾಕಾಲಂ
ಶ್ರಿಯಾ ಸಹ ವಸಾಮ್ಯಹಮ್

ಗಂಡಕಿಯಲ್ಲಿರುವ ಸಾಲಗ್ರಾಮದಲ್ಲಿ


ನರಸಿಂಹ ಸಾಲಗ್ರಾಮ



ಲಕ್ಷ್ಮೀನಾರಾಯಣ, ದ್ವಾರಾವತಿ ನದಿಯಲ್ಲಿರುವ ದ್ವಾರಕಾಶಿಲೆಯಲ್ಲಿ ಶ್ರೀ ಕೃಷ್ಣ, ನರ್ಮದಾ ನದಿ ತೀರದಲ್ಲಿ ದೊರೆಯುವ ಬಾಣ ಲಿಂಗದಲ್ಲಿ ಶಿವನ ಸಾನ್ನಿಧ್ಯ ವಿರುವುದು.

**ರೂಪುರೇಷೆಗಳು :**

ಸಾಲಗ್ರಾಮಗಳಲ್ಲಿ ಎ) ಜಲೋದ್ಭವ, ಬಿ) ಭೂಮಿಜ ಎಂದು ಎರಡು ವಿಧಗಳಿವೆ. ಜಲದಲ್ಲಿ ಸಿಗುವ ಸಾಲಗ್ರಾಮವು ಮೃದುವಾಗಿ ಮತ್ತು ಆಕರ್ಷಕವಾಗಿರುವುದು. ಎರಡನೆಯದು ಸ್ವಲ್ಪ ಒರಟಾಗಿರುವುದು -

ಮೂರ್ತಯಃ ದ್ವಿಧಾಃ ಜ್ಞೇಯಾಃ
ಜಲಜಾಃ ಸ್ಥಲಜಾಃ ತಥಾ
ಜಲಸ್ಥಮ್ ಕೋಮಲಮ್ ಸ್ನಿಗ್ಧಮ್
ತಟಸ್ಥಮ್ ಪರುಶಮ್ ಸ್ಮೃತಮ್

'ಪ್ರಮೇಯ ರತ್ನಾಕರ' ಎಂಬ ಗ್ರಂಥದ ಪ್ರಕಾರ ಒಟ್ಟು 5535 ರೀತಿಯ ಸಾಲಗ್ರಾಮಗಳಿವೆ. ಇವುಗಳಲ್ಲಿ 513 ಉತ್ತಮವಾದುದು.

ಪಂಚತ್ರಿಮ್ ಸಾಧಿಕೈ ಪಂಚಶತೈಃ
ಪಂಚಸಹಸ್ರಕೈಃ ಸಾಲಗ್ರಾಮಾಃ

ಸ್ಕಂದಪುರಾಣದಲ್ಲಿ ಉತ್ತಮ ಗುಣ ಮಟ್ಟದ ಸಾಲಗ್ರಾಮಗಳ ಬಗ್ಗೆ ವಿಚಾರಗಳಿವೆ. ಒಳ್ಳೆಯ ಸಾಲಗ್ರಾಮವು ಎ) ವದನ/ಬಾಯಿಡೊಗರು, ಬಿ) ಚಕ್ರದ ಗುರುತು, ಸಿ) ವನಮಾಲಾರೇಖೆ (ಶ್ರೀ ಸಾನ್ನಿಧ್ಯದ ಗುರುತು), ಡಿ) ಗೋವಿನಪಾದಗಳ ಗುರುತು - ಮುಂತಾದ ಲಕ್ಷಣಗಳಿಂದ ಕೂಡಿರುವುದು. ವದನ ರಹಿತವಾದವು ಉಗ್ರಸಾಲಗ್ರಾಮಗಳು. 1 ರಿಂದ 12 ಸುರುಳಿಗಳನ್ನು ಗುರುತಿಸಲಾಗಿದೆ. ಇವು ಕೋಶಿಕೆಯಂತೆ ಅಥವ ಉದ್ದವಾಗಿ ಕೇಸರಾಕಾರಾವಾಗಿರುವುವು. ಕಪ್ಪು, ಕಂದುಬಣ್ಣದ್ದು, ಬಿಳಿ (ಬೂದಿ) ಬಣ್ಣದ್ದು, ನೀಲಿ ಹಾಗೂ ಹಳದಿ ಬಣ್ಣಗಳ ಸಾಲಗ್ರಾಮಗಳನ್ನು ಗುರುತಿಸಲಾಗಿದೆ.

ವೈ ಲಕ್ಷಣ್ಯಮ್ ವಿಶೇಷೇಣ
ಜ್ಞಾತುಮ್ ಶಕ್ಯೋನ ವೈಕಲ್ಪೈ
ವರ್ಣರೂಪಾದ್ಯ ವಯುವೈಃ
ಪ್ರಯಾಣಪಿಲ ವಾಂಛನ್ಯೈಃ
ವಿಪ್ರಾಣಂ ಮೂರ್ತಯಃ
ಸರ್ವಪೂಜನೀಯಾ ಪ್ರಯತ್ನತಃ

ಒಟ್ಟು 81 ರೀತಿಯ ಸಾಲಗ್ರಾಮಗಳು ಪೂಜಾರ್ಹವಾಗಿವೆ ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಇವುಗಳ ವರ್ಗೀಕರಣ ಇಂತಿದೆ. ದಶಾವತಾರ - 10, ಕೇಶವಾದಿ ನಾಮಗಳು - 12, ವ್ಯೂಹ ಚತುಷ್ಟಯ - 4. ಮಿಕ್ಕವು ಇತರವರ್ಗಗಳಿಗೆ ಸೇರಿವೆ. ತುಲಸ್ಯು ಪಾಖ್ಯಾನದಲ್ಲಿ ಹೇಳಿರುವ ಹಲವಾರು ಉದಾಃ ಒಂದು ಬಾಯಿ, 4 ಚಕ್ರ ವನಮಾಲೆ ಕಪ್ಪು ಬಣ್ಣದ್ದು ಲಕ್ಷ್ಮಿನಾರಾಯಣ ಸಾಲಗ್ರಾಮ ಏಕದ್ವಾರಂ ಚತುಶ್ಚಕ್ರಂ ವನಮಾಲಾ ವಿಭೂಷಿತಂ ಲಕ್ಷ್ಮೀನಾರಾಯಣಾಭಿದಂ - X-50. ವನಮಾಲೆ ಗುರುತಿಲ್ಲದಿದ್ದರೆ ಅದು ಜನಾರ್ದನಸಾಲಿಗ್ರಾಮ - 51. 2 ವದನಗಳು, 4 ಚಕ್ರಗಳು ಗೋಪಾದದಗುರುತು - ರಘುನಾಥ ಮೂರ್ತಿ - 51. ವರ್ತುಲಾಕಾರವಾಗಿದ್ದು 2 ಸಣ್ಣಚಕ್ರಗಳು ಹಸಿರು ಬಣ್ಣದ್ದು ವಾಮನ ಸಾಲಗ್ರಾಮ. ಗುಂಡಗೆ ದಪ್ಪವಾಗಿದ್ದು 2 ಚಕ್ರಗಳಿದ್ದರೆ ದಾಮೋದರ ಸಾಲಗ್ರಾಮ. ಗೌಡೀಯ ವೈಷ್ಣವರು ಇದನ್ನು ರಾಧಾರಮಣ ಸಾಲಗ್ರಾಮ ಎಂದು ಕರೆಯುವರು. 14 ಚಕ್ರಗಳಿರುವ ಕಪ್ಪುಬಣ್ಣದ ದೊಡ್ಡಸಾಲಗ್ರಾಮ. ಅನಂತ ಪದ್ಮನಾಭ. ಸಾಲಗ್ರಾಮ ಪೂರ್ತಚಕ್ರಗಳಿದ್ದರೆ ಅದು ಅನಂತ ಸಾಲಗ್ರಾಮ. ಎರಡು ಚಕ್ರವಿರುವ ಕುದುರೆ ಮೂತಿಯಂತೆ ಕಂಡರೆ (ಬಾಯಿ ಬಿಟ್ಟಿರುವ ರೀತಿ) ಹಯಗ್ರೀವ ಸಾಲಗ್ರಾಮ ದ್ವಿಚಕ್ರಂ ಹಯ ಭಂ ಹಯಗ್ರೀವಂ. ಮೇಲೆ ಕೆಳಗೆ ಚಕ್ರ ದೊಡ್ಡಬಾಯಿ ತೆರೆದಿರುವುದು ಉಗ್ರನರಸಿಂಹ ಸಾಲಗ್ರಾಮ. ಇದರಲ್ಲಿ ವನಮಾಲ ರೇಖೆ ಇದ್ದರೆ ಅದು ಲಕ್ಷ್ಮೀನರಸಿಂಹ. ಬಾಯಿಯ ಮುಂಭಾಗದಲ್ಲೇ ಎರಡು ಚಕ್ರಗಳಿದ್ದು ಬೂದು ಬಣ್ಣ ಉಳ್ಳ ಸಾಲಗ್ರಾಮ ವಾಸುದೇವ. ದ್ವಾರ ದೇಶೇದ್ವಿಚಕ್ರಂ ವಾಸುದೇವಂ. ಸೂಕ್ಷ್ಮವಾದ ಚಕ್ರ ಅನೇಕ ರಂಧ್ರಗಳ ಹಳದಿಬಣ್ಣದ್ದು ಪ್ರದ್ಯುಮ್ನ ಸಾಲಗ್ರಾಮ. ಪ್ರದ್ಯುಮ್ನಂ ಸೂಕ್ಷ್ಮಚಕ್ರಂ ಚ ನವೀನ ನೀರದ ಪ್ರಭಂ ಸುಶ್ಚಿರಚ್ಛಿದ್ರಂ ಬಹುಲಂ - 61. ಒಂದಕ್ಕೊಂದು ಸೇರಿದಂತಿರುವ ಚಕ್ರ ಉಳ್ಳ ಕಂದು ಬಣ್ಣದ ಸಾಲಗ್ರಾಮ ಸಂಕರ್ಷಣ ಮೂರ್ತಿ-62. ವರ್ತುಲಾಕಾರವಿರುವ ಪೀತವರ್ಣ, ಕಮಲ ರೇಖೆ ಉಳ್ಳದ್ದು ಅನಿರುದ್ಧ ಸಾಲಗ್ರಾಮ. ಅನಿರುದ್ಧಂತು ಪೀತಾಭಂ ವರ್ತುಲಂ - 63. ಒಂದು ಚಕ್ರ ಮಾತ್ರ ಇದ್ದರೆ ಅದು ಸುದರ್ಶನ ಸಾಲಗ್ರಾಮ. ಸುದರ್ಶನಂ ಚ ಏಕ ಚಕ್ರಂ - 57. ದೀಪದ ಬೆಳಕಿನಲ್ಲಿ ನೋಡಿದಾಗ ಕೆಂಪು ಬಣ್ಣ ಕಂಡರೆ ಅದು ರತ್ನ ಗರ್ಭ ಸಾಲಗ್ರಾಮ. ಚಪ್ಪಟೆಯಾಗಿ ಉದ್ದವಾದ ಮತ್ಸ್ಯ ಸಾಲಗ್ರಾಮದಲ್ಲಿ ಮೂತಿ ಮತ್ತು ಬಾಲದಲ್ಲಿ ಚಕ್ರಕಲೆಗಳಿರುವುವು. ಸಾಲಗ್ರಾಮ ತುಂಬಾ ಪ್ರಸಿದ್ಧಿ ಹಾಗೂ ಪವಿತ್ರವಾದುದು. ಇದಕ್ಕೆ ತುಂಬಾ ಬೇಡಿಕೆ ಇದೆ. ಧವಳಗಿರಿಗೆ ಸೇರಿದಂತೆ ಮಚ್ಚಪುಚ್ಚರೆ (Fish-Tail Mountain) ಎಂಬ ಪರ್ವತಪ್ರದೇಶದಲ್ಲಿ ಸಿಗುವ ಸಾಲಗ್ರಾಮಗಳು ಮತ್ಸ್ಯ ಸಾಲಗ್ರಾಮಗಳು.

ಅವತಾರಗಳ ಆಧಾರದಂತೆ ಕೃಷ್ಣಸಾಲಗ್ರಾಮಗಳು 16 ರೀತಿಯವು, ನೃಸಿಂಹ-13, ರಾಮ - 12, ನಾರಾಯಣ - 9, ಗೋಪಾಲ - 6, ವರಾಹ - 4, ಸುದರ್ಶನ - 4, ಬಲರಾಮ - 3, ವಾಮನ - ಪರಶುರಾಮ - ದಾಮೋದರ - ವಾಸುದೇವ - ತಲಾ 2 ರೀತಿಯಲ್ಲಿವೆ. ಕೂರ್ಮ, ದತ್ತಾತ್ರೇಯ, ಲಕ್ಷ್ಮೀ, ತ್ರಿಮೂರ್ತಿ, ಸೂರ್ಯ - ತಲಾ ಒಂದು ರೀತಿಯಲ್ಲಿ ಗುರುತಿಸಲ್ಪಟ್ಟಿವೆ.

ತುಂಬಾ ದೊಡ್ಡದು (ಮಠ/ಆಶ್ರಮ/ದೇವಸ್ಥಾನಗಳಲ್ಲಿ ಮಾತ್ರ) ಅಥವ ಗುಲಗಂಜಿಯಂತೆ ತುಂಬಾ ಚಿಕ್ಕ ಸಾಲಗ್ರಾಮ - ಎರಡೂ ಸಲ್ಲದು. ಕಿತ್ತಳೆ ಹಣ್ಣಿನ ಗಾತ್ರದ್ದು ಮಧ್ಯಮ. ನೆಲ್ಲಿಕಾಯಿ ಅಥವಾ ಮಕ್ಕಳು ಆಟಕ್ಕಾಗಿ ಉಪಯೋಗಿಸುವ ಗೋಲಿ ಗಾತ್ರದ್ದು ತುಂಬಾ ಉತ್ತಮವಾದ್ದು. ಬೆಸಸಂಖ್ಯೆ

ಸಾಲಗ್ರಾಮ ಕೂಡದು. ಆದರೆ ಪರಂಪರೆಯಾಗಿ ಒಂದೇ ಸಾಲಗ್ರಾಮ ಮನೆಯಲ್ಲಿ ಆರಾಧಿಸಿಕೊಂಡು ಬಂದಿದ್ದರೆ ಪರವಾಗಿಲ್ಲ. 2,3,5 ಕೂಡದು. 4,6,8,10,12 ಆಗಬಹುದು. 12 ಸಾಲಗ್ರಾಮಗಳಿರುವ ಮನೆ ದಿವ್ಯಕ್ಷೇತ್ರದ ಲೆಕ್ಕ. ಇದು ಚೈತನ್ಯ ಮಹಾಪ್ರಭುವಿನ ಕಾಲದಿಂದಲೂ ಬೆಳೆದು ಬಂದಿರುವ ನಂಬಿಕೆ. ಸಾಲಗ್ರಾಮಕ್ಕೆ ಪ್ರತ್ಯೇಕ ಪೂಜೆ ಮಾಡುವಾಗ ಓಂ ನಮೋ ಭಗವತೇ ವಿಷ್ಣವೇ ಶ್ರೀ ಸಾಲಗ್ರಾಮ ವಾಸಿನೇ ಸರ್ವಾಭೀಷ್ಟಪ್ರದಾಯ ಸಕಲ ದುರಿತ ನಿವಾರಿಣೇ ಸಾಲಗ್ರಾಮಾಯ ಸ್ವಾಹಾ - ಎಂಬ ಮಂತ್ರವನ್ನು ಹೇಳುವರು. ಪ್ರತಿ ನಿತ್ಯವೂ ಬಿಡದೇ ಸಾಲಗ್ರಾಮ ಆರಾಧನೆಯನ್ನು ಮಾಡಬೇಕು. ಸ್ವಯಂ ವ್ಯಕ್ತ ಕ್ಷೇತ್ರಗಳಲ್ಲಿ ಸಾಲಗ್ರಾಮ ಪ್ರಧಾನವಾದುದು. ಇಲ್ಲಿ ಭಗವಂತನ ನಿತ್ಯಸಾನ್ನಿಧ್ಯವಿರುವುದರಿಂದ ಕಾರಣಾಂತರ ದಿಂದ ಆರಾಧನೆ ನಿಂತುಹೋದರೆ ಸಂಪ್ರೋಕ್ಷಣೆಯ ಅವಶ್ಯಕತೆ ಇಲ್ಲ. ಬೇರೆ ಶಿಲಾಮೂರ್ತಿಗಳಂತೆ ಸಾಲಗ್ರಾಮಕ್ಕೆ ಪ್ರತಿಷ್ಠಾಪನೆಯ ವಿಧಿ ಅನವಶ್ಯ. ರಾಮಕೃಷ್ಣಮೂರ್ತಿಗಳಂತೆ ಆವಾಹನೆಯೂ ಬೇಕಿಲ್ಲ. ಹಸುವಿನ ಹಾಲಿನಲ್ಲಿ ನೆನೆಸಿದರೆ ಶಿಲೆಯಲ್ಲಿರುವ ದೋಷಗಳು ಅಥವ ಅಶುದ್ಧ ಅಂಶಗಳು ಇಲ್ಲವಾಗುವುದು. ಗಂಡಕೀ ನದಿಯಲ್ಲಿ ದೊರೆಯುವ ಯಾವುದೇ ಸಾಲಗ್ರಾಮ ಶಿಲೆಯು ತುಂಬಾ ಶ್ರೇಷ್ಠವಾದದ್ದು ಹಾಗೂ ಪೂಜನೀಯವಾದುದು ಎಂದು ಪಾದ್ಮ ಹಾಗೂ ವಿಷ್ಣು ತಿಲಕ ಸಂಹಿತೆ ತಿಳಿಸುವುವು.

ನಿತ್ಯಂ ಸನ್ನಿಧಿಃ ಏತಾ ಸು
ಪರಸ್ಯಪರಮಾತ್ಮನಃ ನ ಪ್ರತಿಷ್ಠಾ
ವಿಧಾತವ್ಯಾ ನ ಚೈವ
ಆವಾಹನಾದಿಗಮೇ ನಾವಾಹನಂ
ನ ಪ್ರತಿಷ್ಠಾ ನ ಶಾಂತಿಃ
ನೈವನಿಷ್ಕೃತಿಃ ದುಗ್ಧೇನ
ಸ್ನಾಪಯೇತ್ ಬ್ರಹ್ಮನ್
ಸ್ಪರ್ಶಾತ್ಸ್ಯೈಃ ದೂಷಿತಾಯತಿ
ಮಂತ್ರ ಉಪಚಾರ ವಿಧಿಭಿಃ
ಹೀನಮಪಿ ಅಸ್ಯಪೂಜನಮ್
ಮುಕ್ತಿಮ್ ದದಾತಿ
ಸಾರೂಪ್ಯಾಂ ದಶಪೂರ್ವೈಃ
ದಶಾಪರ್ಯೆ ಯಾಗಾಪಿ ಮೂರ್ತಿಃ
ಸಂಪೂಜ್ಯಾ ಗಂಡಕೀ ಸಂಭವಾಶಿಲಾ

**ಮಹಿಮೆ - ಫಲಶ್ರುತಿ :**

ಸಾಲಗ್ರಾಮ ಮೂರ್ತಿಯ ಪೂಜೆಯಿಂದ ಧರ್ಮಾರ್ಥಕಾಮ ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥ ಪ್ರಾಪ್ತವಾಗುವುದು ಎಂದು ಪದ್ಮಪುರಾಣದಲ್ಲಿ ಹೇಳಿದೆ. ಇಷ್ಟಕಾಮನೆಗಳನ್ನು ಬೇಡದ ಭಕ್ತನಿಗೆ ಸಾಲಗ್ರಾಮದ ಶಿಲಾ ಲಕ್ಷಣ ಬಾಧಿಸದು. ಸಾಲಗ್ರಾಮದಲ್ಲಿ ನಾರಾಯಣನು ದ್ವಾರಕಾಶಿಲೆಯಲ್ಲಿ ಶ್ರೀಕೃಷ್ಣನ ಸಾನ್ನಿಧ್ಯ ವಿರುವುದರಿಂದ ಇವುಗಳ ನಿತ್ಯಾರಾಧನೆಯಿಂದ ಮೋಕ್ಷಸಿದ್ಧಿ ಉಂಟಾಗುವುದು ಎಂದು ಶಾಂಡಿಲ್ಯ ಸ್ಮೃತಿ ತಿಳಿಸುವುದು. ಸಾಲಗ್ರಾಮ, ದ್ವಾರಕಾಶಿಲೆ, ಬಲಮುರಿ ಶಂಖ ಮತ್ತು ತುಳಸಿ - ಇವು ಒಟ್ಟಿಗೆ ಇರುವ ಮನೆಯಲ್ಲಿ ಯಾರಾದರೂ ಮೃತಪಟ್ಟರೆ ಅವರಿಗೆ ವೈಕುಂಠಪ್ರಾಪ್ತಿ ಹಾಗೂ ಆ ಮನೆಯಿಂದ 3 ಯೋಜನ ವ್ಯಾಪ್ತಿಯಲ್ಲಿರುವ ಎಲ್ಲ ವಾಸಿಗಳಿಗೂ ಭಗವಂತನ ಸಾಯುಜ್ಯಾದಿಗಳು ದೊರೆಯುವುದು. ಅಂಥಾ ಮನೆಗಳಲ್ಲಿ ಬ್ರಹ್ಮಹತ್ಯ ದೋಷವಿದ್ದರೂ ಸಾಲಗ್ರಾಮದ ಮಹಿಮೆಯಿಂದ ಅದು ತಟ್ಟದು. 1 ಲಕ್ಷ ಬ್ರಹ್ಮಹತ್ಯ ದೋಷವಿದ್ದರೂ ನಿವಾರಣೆ ಆಗುವುದು. ಸಾಲಗ್ರಾಮಕ್ಕೆ ಅಭಿಷೇಕ ಮಾಡಿದ ತೀರ್ಥವನ್ನೂ, ನಿವೇದಿಸಿದ ಪ್ರಸಾದವನ್ನು ಸ್ವೀಕರಿಸಿದರೆ 1000 ಅಗ್ನಿಷ್ಟೋಮ 100 ವಾಜಪೇಯ ಯಾಗ ಮಾಡಿದಷ್ಟು ಫಲ.

ಸಾಲಿಗ್ರಾಮ ಶಿಲಾ ಯತ್ರ
ಯತ್ರ ದ್ವಾರವತೀ ಶಿಲಾ
ಶಂಖಂ ತು ತುಳಸಿ ಪತ್ರಂ
ತತ್ರ ಸನ್ನಿಹಿತೋ ಹರಿಃ


ಗಂಡಕೀ ನದಿ.



ಸಾಲಗ್ರಾಮೋದ್ಭವೋ ದೇವೋ
ದೇವೋ ದ್ವಾರವತೀ ಭವಃ
ಉಭಯೋಃ ಸಂಗಮೋ ಯತ್ರ
ಬ್ರಹ್ಮಹತ್ಯಾಂ ವ್ಯಪೋಹತೀ
ವಿಷ್ಣು ಪಾದೋದಕಂ ನಿತ್ಯಂ
ಶಿರಸಾಧಾರಯೇತ್ ಪಿಬೇತ್
ಅಗ್ನಿಷ್ಟೋಮ ಸಹಸ್ರಸ್ಯ
ವಾಜಪೇಯ ಶತಸ್ಯ ಚ
ಯತ್ ಪುಣ್ಯಂ ಲಭತೇ ನಿತ್ಯಂ
ವಿಷ್ಣೋಃ ನೈವೇದ್ಯ ಭಕ್ಷಣಾತ್

ಸಾಲಗ್ರಾಮ ತುಳಸಿ ಮತ್ತು ಶಂಖವನ್ನು ಒಂದೇ ಸ್ಥಳದಲ್ಲಿಟ್ಟು ಪೂಜಿಸುವವನು ಜ್ಞಾನಿಯಾಗುವವನು ಹಾಗೂ ಶ್ರೀಹರಿಯ ಪ್ರೀತಿಗೆ ಪಾತ್ರನಾಗುವನು. ಹಾಲು ಮೊಸರು ತುಪ್ಪಗಳಿಂದ ಅಭಿಷೇಕಗೊಳ್ಳುತ್ತಿರುವ ಸಾಲಗ್ರಾಮ ದರ್ಶನ ತುಂಬಾ ಫಲಕಾರಿ. ಅನಂತರ ಮಾಡಿದ ಅಭಿಷೇಕ ತೀರ್ಥವನ್ನು ಪ್ರಸಾದವಾಗಿಯೂ ಅಥವ ಊಟದಲ್ಲಿ ಕುಡಿಯುವ ನೀರಿನೊಂದಿಗೆ ಬೆರೆಸಿಯೂ ಸ್ವೀಕರಿಸಬಹುದು. ಸಾಲಗ್ರಾಮದಲ್ಲಿ ನಾರಾಯಣನ ಸಾನ್ನಿಧ್ಯ ಹಾಗೂ ದ್ವಾರಕಾಶಿಲೆಯಲ್ಲಿ ಜಗನ್ನಾಥನ ಸಾನ್ನಿಧ್ಯ ಮಹಿಮೆಯು ಈ ಕಲಿಯುಗದಲ್ಲಿ 10,000 ವರ್ಷಗಳವರೆಗೂ ಇರುವುದು. ಈಗ ಇದರಲ್ಲಿ ಅರ್ಧಕಾಲ ಕಳೆದಿದೆ ಎಂದು ಬ್ರಹ್ಮ ವೈವರ್ತ ಪುರಾಣದಲ್ಲಿ ಹೇಳಿದೆ. ಗಂಡಕೀನದಿಸ್ನಾನದಿಂದ ಎಲ್ಲ ಪಾಪಗಳ ಪರಿಹಾರ ಹಾಗೂ ಪುನರ್ಜನ್ಮವಿಲ್ಲ ಎಂದು ಹೇಳಲ್ಪಟ್ಟಿದೆ.

ಸಾಲಗ್ರಾಮೋಹರೋಃ ಮೂರ್ತಿಃ
ಜಗನ್ನಾಥಃ ಚ ಭಾರತಮ್

ಹತ್ತಾರು ತಲೆಮಾರುಗಳಿಂದ ಆರಾಧಿಸಲ್ಪಟ್ಟ ಸಾಲಗ್ರಾಮ ತುಂಬಾ ವಿಶೇಷವಾದದ್ದು ಇಂಥಾ ಮನೆಗಳಲ್ಲಿ ಸಾಲಗ್ರಾಮವನ್ನು ಕೊಡುವುದೂ ಇಲ್ಲ ತರುವುದೂ ಇಲ್ಲ. ಬಲರಾಮ ಕೃಷ್ಣರ ಪಾದ ಸ್ಪರ್ಶ ಮಹಿಮೆಯಿಂದಲೇ ಎಲ್ಲ ಶಿಲೆ ಮಣ್ಣಿನ ಧೂಳು ಸಹ ಪರಮ ಪವಿತ್ರವಾದುವು. ಗಂಗಾದಿ ಪುಣ್ಯ ನದಿಗಳೂ ಕೂಡ ಸಾಲಗ್ರಾಮಕ್ಕೆ ಅಭಿಷೇಕ ಮಾಡಿದ ತೀರ್ಥ ಸ್ಪರ್ಶವನ್ನು ಅಪೇಕ್ಷಿಸುವುವು. ಹಿಂದಿನ ಕಾಲದಲ್ಲಿ ಸಾಲಗ್ರಾಮವನ್ನು ಕೈಯಲ್ಲಿಟ್ಟುಕೊಂಡು ಪ್ರಮಾಣ ಮಾಡಿಸುತ್ತಿದ್ದರು ಎಂದು ತುಲಸ್ಯುಪಾಖ್ಯಾನದ 65 ಮತ್ತು 70 ನೆ ಶ್ಲೋಕಗಳಲ್ಲಿ ವಿವರಣೆ ಇದೆ.

ಶ್ರೇಷ್ಠವಾದ ಸಾಲಗ್ರಾಮ ಆರಾಧನೆಯಿಂದ ದುರ್ಜನರ ಸಂಗ ದೂರವಾಗುವುದು. ಮೂರ್ತಿಪ್ರತಿಷ್ಠೆ, ವ್ರತಾಚರಣೆ, ದಾನ, ಶ್ರಾದ್ಧ ವಿಧಿಗಳನ್ನು ಸಾಲಗ್ರಾಮ ಸಾನ್ನಿಧ್ಯದಲ್ಲಿ ಮಾಡಿದರೆ ಅಖಂಡ ಫಲಪ್ರಾಪ್ತಿ ಉಂಟಾಗುವುದು. ಪ್ರಾಯಶ್ಚಿತ್ತಕ್ಕಾಗಿ ಸಾಲಗ್ರಾಮವನ್ನು ದಾನಮಾಡಿ ಉಪವಾಸ ವ್ರತವನ್ನೂ ಆಚರಿಸುವರು. ಭಾವಿ ಅಳಿಯ ದೇವರಿಗೆ ಮಾವನಾದವನು ಪೂಜಾಸಾಮಗ್ರಿಗಳ ಜೊತೆ ಸಾಲಗ್ರಾಮವನ್ನು ಉಡುಗೊರೆಯಾಗಿ ಕೊಡುವ ಪದ್ಧತಿ ಹಿಂದಿನ ಕಾಲದಿಂದಲೂ ಬಂದಿದೆ. ಕಪ್ಪು ಸಾಲಗ್ರಾಮ ಮೋಕ್ಷವನ್ನೂ ನೀಲಿ ಸಾಲಗ್ರಾಮ ಎಲ್ಲ ಸೌಕರ್ಯವನ್ನೂ ಹಳದಿ ಸಾಲಗ್ರಾಮ ಧನವೃದ್ಧಿಯನ್ನೂ ಕೆಂಪು ಸಾಲಗ್ರಾಮ ರಾಜ್ಯಪ್ರಾಪ್ತಿಯನ್ನು ಹಲವಾರು ಬಣ್ಣಗಳ ಸಾಲಗ್ರಾಮ ನಿರಂತರ ಆನಂದಮಯ ಜೀವನವನ್ನು ವನಮಾಲೆ ಗುರುತಿರುವ ಸಾಲಗ್ರಾಮವು ಸ್ತ್ರೀ ಸೌಭಾಗ್ಯವನ್ನು ಪುತ್ರ ಪೌತ್ರಾದಿ ಸಂಪತ್ತನ್ನು, ಗುಂಡಾದ ಸಾಲಗ್ರಾಮವು ದಿವ್ಯಾನುಭವ ವಾಗ್ವಿಲಾಸವನ್ನೂ ಪದ್ಮ ಚಕ್ರ ಉಳ್ಳ ಸಾಲಗ್ರಾಮವು ಸೌಭಾಗ್ಯ ಧನದಾನ್ಯ ಪಶು ಸಂಪತ್ತನ್ನು ನೀಡುವುದು. ಇಂಥಾ ಸಂಪತ್ತುಗಳನ್ನು ನೀಡುವ ಉತ್ತಮ ಸಾಲಗ್ರಾಮವನ್ನು ಕಂಡುಕೊಳ್ಳುವುದಾದರೂ ಹೇಗೆ? ಪರೀಕ್ಷೆ ಕಠಿಣ. ತಜ್ಞರ ನೆರವು ಅಗತ್ಯ. ಕೃತಕವಾಗಿ ತಯಾರಾಗುವ ಸಾಲಗ್ರಾಮವೂ ಉಂಟು. ಸಾಲಗ್ರಾಮ ಕ್ರಯ ವಸ್ತುವಲ್ಲ. ಆಕಸ್ಮಿಕವಾಗಿ ಒಡೆದ ಸಾಲಗ್ರಾಮ ಪೂಜಾರ್ಹ. ಸಾಲಗ್ರಾಮವನ್ನು ಅಕ್ಕಿಯಲ್ಲಿ ಅಥವ ಹಾಲಿನಲ್ಲಿಟ್ಟಾಗ ಮಾರನೆಯ ದಿನ ಹಾಲಿನ ಮಟ್ಟ ಏರುವುದಿಲ್ಲದೆ ಹಾಲು ಮೊಸರಾಗುವುದು. ಒಳಗೆ ಚಕ್ರವಿದೆಯೆ ಇಲ್ಲವೇ ಎಂಬುದು ವದನದಿಂದ ಪರೀಕ್ಷಿಸಬಹುದು.

ವಿಷ್ಣುಚಕ್ರದ ಸ್ಪರ್ಶದಿಂದ ಗಂಡಕೀ ನದಿಯಲ್ಲಿರುವ ವಸ್ತುಗಳಿಗೆ ಚಕ್ರಕಲೆ ಉಂಟಾಗಿದೆ ಎಂಬ ಕಥೆ ಇದೆ. ದೇವತೆಗಳು ದುಂಬಿಗಳ ರೂಪದಲ್ಲಿ ಇಲ್ಲಿ ವಾಸಮಾಡಲು ಭಗವಂತನು ವಜ್ರಕೀಟವಾಗಿ ಸಂಭವಿಸಿ ವದನವನ್ನು ಮಾಡಿದ್ದಾನೆ ಎಂದು ಪಾಂಚರಾತ್ರ ಆಗಮದಲ್ಲಿ ಹೇಳಿದೆ.

ಆಲಯೋ ವಜ್ರಕೀಟಾಃ ಸ್ಯ
ತದ್ವೃಂದಂ ಗ್ರಾಮ ಉಚ್ಯತೇ
ಅಲಿಗ್ರಾಮ ಸಮೇತತ್ವಾತ್
ಸಾಲಿಗ್ರಾಮ ಸ ಉಚ್ಯತೇ

ವಜ್ರಕೀಟದಿಂದುಂಟಾದ ಶಿಲೆಗಳಿವು ಎಂದು ಭವಿಷ್ಯ ಪುರಾಣ ತಿಳಿಸುವುದು. ವಿಷ್ಣು - ತುಳಸಿಯರ ಪರಸ್ಪರ ಶಾಪವಿಧಿ, ಶಂಖ ಚೂಡನ ಸಂಹಾರ, ಗಂಡಕೀ ನದಿ, ಸಾಲಗ್ರಾಮಶಿಲೆ ಮತ್ತು ತುಳಸಿ ಪತ್ರೆಯ ಉಗಮದ ಕಥೆ - ಬ್ರಹ್ಮ ವೈವರ್ತ ಪುರಾಣದಲ್ಲಿ ಬರುವುದು.

ಬದರಿ ನಾರಾಯಣ, ಮುಕ್ತಿಕ್ಷೇತ್ರದ ಶ್ರೀ ಮೂರ್ತಿ, ಅನಂತ ಶಯನ, ಮೇಲುಕೋಟೆ ಯೋಗಾನೃಸಿಂಹ, ಮದ್ದೂರಿನ ವರದರಾಜ, ಶೀಬಿ ನೃಸಿಂಹ, ದೇವರಾಯನ ದುರ್ಗದ ಯೋಗಾಲಕ್ಷ್ಮೀನೃಸಿಂಹ. ಉಡುಪಿ ಶ್ರೀಕೃಷ್ಣ ಪೂರ್ಣವಾಗಿ ಸಾಲಗ್ರಾಮ ಮೂರ್ತಿಗಳಾಗಿ ಅನಾದಿಕಾಲದಿಂದಲೂ ಪೂಜಿಸಲ್ಪಟ್ಟು ಬಂದಿವೆ.

ಖಠ್ಮಂಡುವಿನ ಪಶುಪತಿನಾಥ ದೇವಸ್ಥಾನ, ಶ್ರೀನಗರ, ಕಾಶಿ, ಹೃಷಿಕೇಶ ಮುಂತಾದ ಕ್ಷೇತ್ರಗಳಲ್ಲಿ ವಿವಿಧ ರೀತಿಯ ಸಾಲಗ್ರಾಮಗಳು ದೊರೆಯುವುವು. ಕಳ್ಳ ಸಾಗಣೆಯ ಶಂಕೆಯಿಂದಾಗಿ ಸಾಮಾನ್ಯವಾಗಿ ಎಲ್ಲಾ ಸಾಲಗ್ರಾಮಗಳು ಮತ್ತು ವಿಶೇಷವಾಗಿ ಸ್ವರ್ಣರೇಖೆ ಇರುವ ಸಾಲಗ್ರಾಮಗಳನ್ನು ನೇಪಾಳ ಸರ್ಕಾರ ನಿಷೇಧಿಸಿದೆ. ಅಕಸ್ಮಾತ್ ಕಂಡರೆ ಪ್ರತಿ ಸಾಲಗ್ರಾಮಕ್ಕೆ ಸುಂಕ ತೆರಿಗೆ ವಿಧಿಸುವರು.

★★★★★

# ದಾಸಸಾಹಿತ್ಯ - ಸದಾಚಾರ

- ಶ್ರೀನಿವಾಸಮತದ

(ಹಿಂದಿನ ಸಂಚಿಕೆಯಿಂದ)

ತುಲಸಿ : ಶ್ರೀ ತುಲಸಿಯಲ್ಲಿ 5317 ಭಗವದ್ರೂಪಗಳಿವೆ.

ಒಲ್ಲನೊ ಹರಿ ಕೊಳ್ಳನೊ ॥ ಪ ॥
ಎಲ್ಲ ಸಾಧನವಿದ್ದು ತುಲಸಿಯಿಲ್ಲದ ಪೂಜೆ ॥ ಅ.ಪ ॥
ಸಿಂಧು ಶತಕೋಟಿ ಗಂಗೋದಕವಿದ್ದು
ಗಂಧ ಸುಪರಿಮಳ ವಸ್ತುವಿದ್ದು
ಚಂದುಳ್ಳ ಆಭರಣ ಧೂಪದೀಪಗಳಿದ್ದು
ಬೃಂದಾವನ ಶ್ರೀ ತುಲಸಿಯಿಲ್ಲದ ಪೂಜೆ ॥ 1 ॥

ದಧಿ ಕ್ಷೀರ ಮೊದಲಾದ ಅಭಿಷೇಕಗಳಿದ್ದು
ಮಧುಪರ್ಕ ಪಂಚೋಪಚಾರವಿದ್ದು
ಮುದದಿಂದ ಮಾಡ್ದ್ದು ಕೃಷ್ಣನ ಪೂಜೆಗೆ
ಸದಮಳ ಶ್ರೀ ತುಲಸಿಯಿಲ್ಲದ ಪೂಜೆ ॥ 2 ॥
ಮಂತ್ರ ಮಹಮಂತ್ರ ಪುರುಷಸೂಕ್ತಗಳಿದ್ದು
ತಂತು ತಪ್ಪದ ತಂತ್ರಸಾರವಿದ್ದು
ಸಂತಸ ಸುಖ ಸಂಪೂರ್ಣನ ಪೂಜೆಗೆ
ತ್ಯಂತ ಪ್ರಿಯಳಾದ ತುಲಸಿಯಿಲ್ಲದ ಪೂಜೆ ॥ 3 ॥

ಕಮಲ ಮಲ್ಲಿಗೆ ಸಂಪಿಗೆ ಜಾಜಿ ಕೇದಗೆ
ವಿಮಲ ಗಂಟೆ ಪಂಚವಾದ್ಯವಿದ್ದು
ಅಮಲ ಪಂಚಭಕ್ಷ್ಯ ಪರಮಾನ್ನವಿದ್ದು
ಕಮಲನಾಭನಿಗೆ ಶ್ರೀತುಲಸಿಯಿಲ್ಲದ ಪೂಜೆ ॥ 4 ॥
ಪೂಜೆಯ ಮಾಡಿದೆ ಶ್ರೀ ತುಲಸಿಯಿಂದ
ಮೂಜಗದೊಡೆಯ ಮುರಾರಿಯನು
ರಾಜಾಧಿರಾಜನೆಂದು ಮಂತ್ರಪುಷ್ಪಗಳಿಂದ
ಪೂಜಿಸಿದರು ಒಲ್ಲ ಪುರಂದರ ವಿಠಲನು ॥ 5 ॥

- ಪುರಂದರದಾಸರು.

ಉಗಾಭೋಗ :

ಸಂತತ ಹನ್ನೆರಡು ಕೋಟಿ ಸುವರ್ಣದ ಪುಷ್ಪ ಸಮರ್ಪಿಸಲು
ಅಂಥ ಫಲದಿ ಕೋಟಿ ಗುಣಿತ ಅರ್ಧತುಲಸಿ ದಳಕೆ
ಕಿಂತು ಮಾತ್ರ ಭಕುತಿಯಿಂದ ಸಂತತ ನಮಿಸಲು
ಶ್ರೀ ಪುರಂದರ ವಿಠಲ ವೈಕುಂಠವನೀವ
ಆದಿವಾರದಲ್ಲಿ ಸಂಜೆ-ರಾತ್ರಿಯಲ್ಲಿ ಅಂಗಾರಕ ಶುಕ್ರವಾರಗಳಲ್ಲಿ
ವೈಧೃತೀ ವ್ಯತೀಪಾತ ಸಂಕ್ರಮಣಗಳಲ್ಲಿ
ಶ್ರೀ ತುಲಸಿ ತೆಗೆದಗೆ ಪುರಂದರ ವಿಠಲ ಮುನಿವ
ಮೂರುದಿನಗಳ ಕಣಗಲ ಪುಷ್ಪ ಆರುತಿಂಗಳ ಬಿಲ್ವ
ಸಂವತ್ಸರದ ತುಲಸೀ ಮೂರು ತಿಂಗಳ ಕಮಲ
ಅಚ್ಯುತಾರ್ಚನೆಗೆ ಬಾಹುದು ಶ್ರೀ ಪುರಂದರ ವಿಠಲ

ಇಲ್ಲದಿದ್ದರೆ ಚಿಗುರು ಎಲಿಯು ಇಲ್ಲದಿದ್ದರೆ ಬೇರು ಮೃತ್ತಿಕೆ
ಇಲ್ಲದಿದ್ದರೆ ಬರಡು ಕಟ್ಟಿಗೆ ಅದೂ ಇಲ್ಲದಿರೆ
ತುಲಸೀ ತುಲಸೀ ಎಂದು ಕೂಗಿದರು ಸಾಕು
ಎಲ್ಲ ವಸ್ತುಗಳಿದ್ದು ತುಲಸಿಯಿಲ್ಲದಿರೆ
ಶ್ರೀ ಪುರಂದರ ವಿಠಲನು ಮುನಿದು ಎಲ್ಲವಗಳನೀಡಾಡುವ
ಒಂದು ಒಂದು ಬೆರಳುಜಪ ಒಂದೆ ಐದು ಬೆರಳುಗೆರೆಯ ಜಪ
ಒಂದೆ ಕೋಟಿ ದರ್ಭೆ ಗಂಟಿನ ಜಪ
ಒಂದೆ ಅನಂತ ತುಲಸಿ ಮಣಿ ಜಪ
ಹೀಗೆಂದು ಪುರಂದರ ವಿಠಲ ನೇಮಿಸಿದ
ಸ್ನಾನದಾನಕೆ ತುಲಸಿದಳ ಪ್ರಭೋಜನಕೆ ತುಲಸಿ
ಶ್ರೀ ಪುರಂದರ ವಿಠಲಗೆ ಅತಿಪ್ರಿಯ ತುಲಸೀ

- ಪುರಂದರದಾಸರು.

ಏಕಾದಶೀ ವ್ರತ :

ವ್ರತಗಳೆಲ್ಲವು ಹರಿದಿನ ವ್ರತಗಳ ಹಿಂದೆ - ಪುರಂದರದಾಸರು.

ಏಕಾದಶಿಯ ಮಾಡದವನ ವ್ರತವು ಯಾತಕೆ - ಕನಕದಾಸರು.

ಹರಿದಿನಕೆ ಮರುದಿನಕೆ ಸರಿಯಿಲ್ಲವೆಂದು
ಹರಿವ ಹಾವನು ಹಿಡಿಯಲಾ - ವಾದಿರಾಜರು.

ನೇಮದಿ ಉಪವಾಸ ಆ ಮಹಾ ಏಕಾದಶಿ
ಕಾಮ ಜನಕನನ್ನು ಪ್ರೇಮದಿ ಸ್ಮರಿಸದೆ
ಹ್ಯಾಂಗೆ ನೀ ದಾಸನಾದೆ ಪ್ರಾಣಿ - ಕನಕದಾಸರು.

ದಶಮಿ ಏಕಾದಶಿ ದ್ವಾದಶಿ ದಿನತ್ರಯದಿ
ಅಶನ ವೆರಡೊತ್ತುಣ್ಣುತ್ತ
ಘಸ ಘಸನೆ ತಾಂಬೂಲ ಪಶುವಿನಂದದಿ ಮೆದ್ದು
ಕುಸುಮಗಂಧಿಯ ರಮಿಸುತ ಸತತ -
ಸಿರಿರಮಣ ತವಚರಣದೊರಕುವುದು ಹ್ಯಾಂಗಿನ್ನು

-ಜಗನ್ನಾಥದಾಸರು.

ಶ್ರೀ ಮಾಧವನ ದಿನದಿ ಉಪವಾಸ ವಿರಬೇಕು
ಸತತ ಹರಿಯ ಸ್ಮರಿಸುತ್ತಿರಬೇಕು - ಪ್ರಾಣೇಶದಾಸರು.

ಹರಿನಾಮ ಹರಿಪಾದ ತೀರಥವಿರಲು
ಹರಿದಿನ ಹರಿದಾಸರ ಪಾದರಜವಿರಲು



ದುರಿತದ ಭಯವ್ಯಾಕೆ ನರಕದ ಭೀತ್ಯಾಕೆ

- (ದೇಹ ಜೀರ್ಣವಾಯಿತು ಸುಳಾದಿಯಲ್ಲಿ ವ್ಯಾಸರಾಯರು)

ಭೋಗಿಶಯನನ ದಿನದಿ ಸಕಲ ಭೋಗಗಳನು ತಾನು ತೊರೆದು
ಭಾಗವತರ ಮೇಳದಿಂದ ಜಾಗರಣೆ ಮಾಡದವನ ಜನ್ಮ
ವ್ಯರ್ಥವಲ್ಲವೇ ಜನ್ಮ ವ್ಯರ್ಥವಲ್ಲವೆ - ಶ್ರೀಪಾದರಾಜರು.

ಹರಿದಿನದಲಿ ಉಂಡ ನರರಿಗೆ ಘೋರ
ನರಕತಪ್ಪದು ಎಂದು ಶ್ರುತಿಯು ಸಾರುತಿದೆ.

-ಪುರಂದರದಾಸರು.

ಏಕಾದಶೀ ವ್ರತವ ಸಾಧಿಸೀ ಶೋಧಿಸೀ
ಏಕ ಭಕುತಿಯಲಿ ಹಾಡಿರೋ ಪಾಡಿರೋ
ಲೋಕದೊಳಗೆಲ್ಲ ಸಾರುತಬೀರುತ ಶ್ರೀಕಾಂತನ ಭಜಿಸಿ

- ವಿಜಯದಾಸರು.

**ಪ್ರಮಾಣ :**

ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ

- ಪದ್ಮಪುರಾಣ.

ಉಪರಾಗ ಸಹಸ್ರಾಣಿ ವ್ಯತಿಪಾತಯುತಾನಿ ಚ
ಅಮಾಲಕ್ಷ್ಯಂತು ದ್ವಾದಶ್ಯಾಃ ಕಲಾಂ ನಾರ್ಹಂತಿ ಷೋಡಶೀಂ

- ವಾಯುಪುರಾಣ.

- ಇತ್ಯಾದಿ.

**ಸತ್ಯ :** ಸತ್ಯಂ ವದ ಎಂಬುದು ತೈತ್ತಿರೀಯ ಉಪನಿಷತ್ತಿನ ದಿವ್ಯಸಂದೇಶ.

ಸತ್ಯವೆಂಬುದೆ ಸ್ನಾನ ಉಪವಾಸ ಜಪನೇಮ
ಆ ಸತ್ಯದಲ್ಲಿ ಮಾಡುವ ಕರ್ಮ ವ್ಯರ್ಥ - ಪುರಂದರದಾಸರು.

ಸತ್ಯವಂತರ ಸಂಗವಿರಲು ತೀರ್ಥವೇತಕೆ.

- ಪುರಂದರದಾಸರು.

ಇಲ್ಲಿಸತ್ಯ ಯಾವುದು ? ಅಸತ್ಯಯಾವುದು ಎಂಬುದನ್ನು ಚೆನ್ನಾಗಿ ತಿಳಿದಿರಬೇಕು. ಅಂತೆಯೇ ಶ್ರೀಮನ್ಮಹಾಭಾರತಕಾರರು ಹೇಳುತ್ತಾರೆ -

ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಂ

ಸತ್ಯ ವಚನವು ಶ್ರೇಯಸ್ಕರವೇ ಆದರೆ ಆ ಸತ್ಯದ ಜ್ಞಾನವು ದುಜ್ಞೇಯವಾಗಿದೆ.

**ಸಜ್ಜನ ಸಂಗ :** ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ.

ಸಜ್ಜನರ ಸಂಗವು ಭಗವದಪರೋಕ್ಷಕ್ಕೆ ಅವಶ್ಯಕವಾದ ಜ್ಞಾನಕ್ಕೆ ಸಾಧನೆಗೆ ಕಾರಣ. ಹಾಗಾಗಿ ದುಷ್ಟ ಜನರ ಸಂಗದಿಂದ ದೂರವಿರಬೇಕಾದ್ದು ಅವಶ್ಯ.

ಜಾಲಿಯ ಮರದಂತೆ ಧರೆಯೊಳು ದುರ್ಜನರು
ಮೂಲಾಗ್ರ ಪರಿಯಂತ ಮುಳ್ಳು ಕೂಡಿಪ್ಪಂಥ
ತನ್ನಿಂದ ಉಪಕಾರ ತಟುಕಾದರೂ ಇಲ್ಲ
ಬಿನ್ನಣ ಮಾತಿಗೆ ಕೊನೆಯಿಲ್ಲವೋ
ಅನ್ನಕ್ಕೆ ಸೇರಿದ ಕುನ್ನಿಮಾನವರಂತೆ
ಇನ್ನಿದರ ಕಾರ್ಯವು ಪುರಂದರ ವಿಠಲ

- ಪುರಂದರದಾಸರು.

ಇವನ ಪೋಲುವ ಪಾಪಿ ಜೀವರು
ಭುವನ ಮೂರರೊಳಿಲ್ಲ ನೋಡಲು
ನವವಿಧ ದ್ವೇಷಗಳಿಗಾಕರ ನೆನಿಸಿಕೊಳುತಿಪ್ಪ
ಬವರದಲಿ ಬಂಗಾರದಲಿ ನಟ
ಯುವತಿ ದ್ಯೂತಾ ಪೇಯ ಮೃಷದಲಿ
ಕವಿಸಿ ಮೋಹದಿ ಕೆಡಿಸುವನು ಎಂದರಿದು ತ್ಯಜಿಸುವುದು

-ಹರಿಕಥಾಮೃತಸಾರ. 20-20.

ಕಾಮ ಲೋಭಕ್ರೋಧ ಹಿಂ
ಸಾಮಯಾನೃತ ದಾಂಭಿಕ ಪಟುತ್ವ
ಧಾಮನವತಾರಗಳ ಭೇದ ಅಪೂರ್ಣ ಸುಖಬದ್ಧ
ಆಮಿಷ ನಿವೇದಿತವ ಭೋಜ್ಯದಿ
ತಾಮಸಾನ್ನವನುಂಬ ತಾಮಸ
ಶ್ರೀ ಮದಾಂಧರ ಸಂಗದಿಂದಲಿ ತಮವೆ ವರ್ಧಿಪುದು

(ಸರ್ವಸ್ವಾತಂತ್ರ ಸಂಧಿ - 17)

- ಇಂತಹ ದುರ್ಜನರಿಂದ ದೂರವಿದ್ದು ಸಜ್ಜನರ ಸಂಗವನ್ನು ಅಪೇಕ್ಷಿಸಬೇಕು, ಮಾಡಬೇಕು.

ಜ್ಞಾನ ಭಕ್ತಿ ವಿರಕ್ತಿ ವಿನಯ ಪು
ರಾಣ ಶಾಸ್ತ್ರಶ್ರವಣ ಚಿಂತನ
ದಾನ ಶಮದಮಯಜ್ಞ ಸತ್ಯಾಹಿಂಸೆ ಭೂತದಯ
ಧ್ಯಾನ ಭಗವನ್ನಾಮ ಕೀರ್ತನೆ
ಮೌನ ಜಪತಪ ವ್ರತಸುತೀರ್ಥ
ಸ್ನಾನ ಮಂತ್ರ ಸ್ತೋತ್ರ ವಂದನ ಸಾತ್ವಿಕ ಗುಣವು

(ಸರ್ವಸ್ವಾತಂತ್ರ್ಯ ಸಂಧಿ - 18)

ಅಂತೆಯೇ - 'ಸಂಗವಾಗಲಿ ಸಾಧು ಸಂಗವಾಗಲಿ. ಸಂಗದಿಂದ ಲಿಂಗದೇಹ ಭಂಗವಾಗಲಿ' ಎನ್ನುತ್ತಾರೆ ಜಗನ್ನಾಥದಾಸರು. ಈ ಸಜ್ಜನ ಸಂಗದಿಂದ ಭಗವಂತನಲ್ಲಿ ಭಕ್ತಿಯು ಅಭಿವೃದ್ಧಿಯಾಗುತ್ತದೆ.

ಸತಾಂ ಪ್ರಸಂಗಾನ್ಮಮ ವೀರ್ಯಸಂವಿದೋ
ಭವಂತಿ ಹೃತ್ಕರ್ಣ ರಸಾಯನಾಃ ಕಥಾಃ
ತಜ್ಜೋಷಣಾದಾಶ್ವಪ ವರ್ಗ ವರ್ತ್ಮನಿ
ಶ್ರದ್ಧಾರತೀ ಭಕ್ತಿರನು ಕ್ರಮಿಷ್ಯತಿ

- ಭಾಗವತ - 3-25-25.

## ಶ್ರೀ ವೇಣುಗೋಪಾಲಸ್ವಾಮಿ ಬ್ರಹ್ಮೋತ್ಸವಗಳು
ಕಾರ್ವೇಟಿನಗರ

2-6-2002 ರಿಂದ 10-6-2002

## ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು
ಅಪ್ಪಲಾಯಗುಂಟ

20-6-2002 ರಿಂದ 28-6-2002























ತಿರುಪತಿ ತಿರುಮಲೆಗಳಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಪಾಲುಗೊಂಡ ವಿವಿಧ ಕಾರ್ಯಕ್ರಮ ಚಿತ್ರಗಳು

**ಭಕ್ತಿ :**

ನಿತ್ಯ ಸುಖವನ್ನಪೇಕ್ಷಿಸುವ ಜೀವರು ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕು. ವ್ಯಾಸರಾಯರು - ಅಮಲಾ ಭಕ್ತಿಶ್ಚ ತತ್ಸಾಧನಂ - ಎಂದು ತಿಳಿಸಿರುತ್ತಾರೆ. ಶ್ರೀಪಾದರಾಯರು ತಮ್ಮ ಕೀರ್ತನೆಯೊಂದರಲ್ಲಿ ಹೇಳಿರುವುದು ಹೀಗೆ -

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ
ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವವಗೆ

..................................

ಸುಸಂಗ ಹಿಡಿಯಲಿ ಬೇಕು ದುಸ್ಸಂಗ ಬಿಡಲಿ ಬೇಕು
ರಂಗ ವಿಠಲನ್ನ ಬಿಡದೆ ನೆರೆ ನಂಬಿರಬೇಕು.

ಈ ಭಾಗವನ್ನು ಕನಕದಾಸರು ಹರಿಭಕ್ತಿಸಾರದಲ್ಲಿ ಮಾರ್ಮಿಕವಾಗಿ ಬಿಡಿಸಿಟ್ಟಿದ್ದಾರೆ -

ಶಕ್ತಿಯೆಂಬುದು ಮಾಯೆ ಮಾಯಾ
ಶಕ್ತಿಯದು ತನುವಿನಲಿ ನೀ ನಿಜ
ಮುಕ್ತಿದಾಯಕ ನಿರಲು ಸುಖದುಃಖಾದಿಗಳಿಗಾರು
ಯುಕ್ತಿಯೊಳಗಿಬನರಿತು ಮನದಿ ವಿ
ಶಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮ ನನವರತ

ಪುರಂದರ ದಾಸರು - ಸುಮ್ಮನೇ ಬರುವುದೇ ಮುಕ್ತಿ ನಮ್ಮ ಅಚ್ಯುತಾನಂತನ ನೆನೆಯದೇ ಭಕ್ತಿಯಿಂದಲಿ - ಎನ್ನುತ್ತ ಭಕ್ತಿಯು ಮುಕ್ತಿಗೆ ಅತ್ಯಂತ ಅವಶ್ಯಕವೆಂಬುದನ್ನು ಸಾರಿದ್ದಾರೆ. ಮುಂದುವರಿದು ಅವರು ಹೇಳುವುದು ಹೇಗೆ -

ಹರಿಭಕುತಿಯುಳ್ಳವರ ಶರೀರವೇ ಕುರುಕ್ಷೇತ್ರ
ನರರೆಂದು ಅವರ ಬಗೆವವರು ನರಕ ಸೇರುವರು
ಸದಮಲನ ನೆನೆಯುವ ಹೃದಯ ಕಾಶೀಪುರವು
ಮಧುವೈರಿಯ ನೆನೆವ ಮನ ಮಣಿಕರ್ಣಿಕೆ
ಪದುಮನಾಭನ ಪಾಡುವ ವದನವೇ ವೈಕುಂಠ
ಸದಮಲನ ಬಣ್ಣಿಸುವ ಜಿಹ್ವೆ ಶ್ರೀಮುಷ್ಣ

..........................................

ಪಕ್ಷಿವಾಹನ ಪುರಂದರ ವಿಠಲನು ಕೊಡುವ ಮುಕುತಿ

ಶ್ರೀಹರಿಯಲ್ಲಿ ಮಾನವರು ಮಾಡಬಹುದಾದ ಭಕ್ತಿ ಒಂಭತ್ತು ವಿಧವಾಗಿದೆ. ಇದನ್ನೇ ನವವಿಧ ಭಕ್ತಿ ಎಂದರು.

ಹರಿನಾಮ ಶ್ರವಣ ಹರಿ ನಾಮಸ್ಮರಣ
ಹರಿ ಪಾದಸೇವನ ಹರಿ ಪೂಜಾವಂದನ
ಹರಿದಾಸಸಖ್ಯತ್ವ ಹರಿಗಾತ್ಮ ಸಮರ್ಪಣ

ಹರಿಭಕ್ತಿಯೇ ಮುಕ್ತಿ ಪಥ ತತ್ವ
ಪುರಂದರ ವಿಠಲನೆ ಪರಮಾತ್ಮ ಸಿದ್ಧ ಪ್ರಸಿದ್ಧ

ಹರಿಯ ಒಂಭತ್ತು ಭಕ್ತಿಯ ಬಲ್ಲಧೀರ
ಮರಳಿ ಸಂಸ್ಕೃತಿಯ ದಾರಿಗೆ ಹುಟ್ಟಿ ಬಾರ
ದುರಾಚಾರ ದುಷ್ಕೃತಿಗಳ ಕಂಡು ಸೇರ
ಹಿರಿಯರೊಳ್ ಬಿರುನುಡಿ ಜಿಹ್ವೆಗೆ ತಾರ

ಪುರಂದರ ವಿಠಲರೇಯನುದಾರ
ಚರಣಾಬ್ಜ ನಿಷ್ಠೆಯ ಗಡಿಯಿಟ್ಟು ತೋರ

..........................................

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ, ಸಖ್ಯಮಾತ್ಮ ನಿವೇದನಂ
- ಇತಿ ಪುಂಸಾ ರ್ಪಿತಾ ವಿಷ್ಣೋಃ ಭಕ್ತಿಃ ಚೇನ್ನವ ಲಕ್ಷಣಾಃ

**ಧರ್ಮ :** ಧರ್ಮಂ ಚರ ಎಂಬುದು ತೈತ್ತಿರೀಯೋಪನಿಷತ್‌ನಸಂದೇಶ.

ಧರ್ಮ ಏಕಃ ಸಹಾಯಃ ಪರ
ಬ್ರಹ್ಮ ಮೂರ್ತಿಯ ಪಾದವ ಭಜಿಸುವ ಜನರಿಗೆ
ಹರಿಭಕುತಿಯನು ಮಾಳ್ಪ ಪರಮ ಭಾಗವತರಿಗೆ
ಕರೆದು ಭೂಸುರರಿಗನ್ನ ವಿತ್ತವರಿಗೆ
ಪರಸತಿಯರನು ಕಂಡು ಮನವೆಳಸದಿದ್ದವಗೆ
ಪರರುಪದ್ರವ ಬಿಡಿಸಿ ಪೊರೆವ ಸುಜನರಿಗೆಲ್ಲ

..........................................

ಮಾತಾ ಪಿತೃಗಳನ್ನು ಪ್ರಿಯದಲ್ಲಿ ಪೊರೆದವಗೆ
ಯಾತ್ರೆಗಳ ಮಾಳ್ಪ ಪುಣ್ಯಾತ್ಮನಿಗೆ
ಧಾತ್ರಿಯೊಳು ಪುರಂದರ ವಿಠಲನ ನಾಮವನ್ನು
ಕೀರ್ತನೆ ಮಾಡಿ ಲೋಲಾಡುತಿಹ ಸುಜನರಿಗೆ

- ಪುರಂದರದಾಸರು.

- ಜೀವನು ಈ ದೇಹವನ್ನು ಬಿಟ್ಟ ಮೇಲೆ ಅವನ ಸಂಗಾತಿಯಾಗಿ ಅವನನ್ನು ಹಿಂಬಾಲಿಸುವುದು ಅವನಿಗೆ ಸಹಾಯ ಮಾಡುವುದು ಧರ್ಮ ಒಂದೇ ಆಗಿದೆ.

ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠ ಸಮಂ ಕ್ಷಿತೌ
ವಿಮುಖಾ ಬಾಂಧವಾ ಯಾಂತಿ ಧರ್ಮಸ್ತದನು ಗಚ್ಛತಿ

- ಮನುಸ್ಮೃತಿ - 4 - 241.

ವೇದ ಪ್ರಣಿಹಿತೋ ಧರ್ಮಃ - ಎಂಬ ಭಾಗವತದ ಉಕ್ತಿಯಂತೆ ವೇದಗಳಲ್ಲಿ ಹೇಳಲ್ಪಟ್ಟಿರುವುದೇ ಧರ್ಮವೆಂದು ತಿಳಿಯಬೇಕು.

ಪರಲೋಕೇ ಧನಂ ಧರ್ಮಃ - ಎಂಬಂತೆ ಪರಲೋಕದಲ್ಲಿ ಜೀವನಿಗೆ ಆತನು ಇಲ್ಲಿ ಆಚರಿಸಿದ ಧರ್ಮವೇ ಧನರೂಪದಲ್ಲಿ ನೆರವಿಗೆ



ಬರುವುದು.

ಅಂತೆಯೇ ನಮ್ಮ ಹರಿದಾಸರು - ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೋ ಎಂಬುದಾಗಿ ತಿಳಿಸಿರುವುದು ಮಾರ್ಮಿಕವಾಗಿದೆ.

ಯತೋ ಧರ್ಮಃ ತತೋ ಜಯಃ ಎಂಬ ಮಹಾಭಾರತದ ಉಕ್ತಿಯನ್ನು ಇಲ್ಲಿ ನೆನೆಯಬೇಕು. ಇದನ್ನೇ ನಮ್ಮ ಹರಿದಾಸರು ಹೀಗೆ ಹೇಳಿದರು-

ಧರ್ಮವೇ ಜಯವೆಂಬ ದಿವ್ಯ ಮಂತ್ರ
ಮರ್ಮವರಿತು ಮಾಡಲಿಬೇಕು ತಂತ್ರ

**ಮನಸ್ಸು :**

ಮನುಷ್ಯನು ಸದಾಚಾರವನ್ನು ಅನುಸರಿಸಲು ಮನಸ್ಸು ಕೂಡ ಮುಖ್ಯ ಪಾತ್ರ ವಹಿಸುತ್ತದೆ. ಅಂತೆಯೇ - ಮನ ಏವ ಮನುಷ್ಯಾಣಾಂ ಕಾರಣ ಬಂಧ ಮೋಕ್ಷಯೋಃ ಎಂದು ತಿಳಿಸಿರುವುದು ಗಮನಾರ್ಹ.

ಮನಸು ತುಂಬಾ ಚಂಚಲವಾದದ್ದು. ಮನಸ್ಸು ವಾಯುವೇಗಕ್ಕು ಮಿಗಿಲಾದದ್ದು ಎಂಬ ಮಾತು ಇದನ್ನೇ ತಿಳಿಸಿಕೊಡುತ್ತದೆ. ಎಂತಲೇ ಹರಿದಾಸರು ಹೀಗೆನ್ನುವರು.

ಮನವೆ ಚಂಚಲ ಮತಿಯ ಬಿಡು
ವನಜ ನಾಭನ ಭಜನೆಯ ಮಾಡು
ಆವಾವ ಕಾಲಕ್ಕೆ ದೇವನಿಚ್ಛೆಯಿಂದ
ಆವಾವುದು ಬರೆ ಸುಖವೆನ್ನು
ಶ್ರೀವರ ಅನಾದಿ ಜೀವರ ಕ್ಲಪ್ತದಂತೆ
ಈವನು ನಿಜಸ್ವಭಾವ ಬಿಡದೆ ನಿತ್ಯ
ಕೇಶವಾಚ್ಯುತ ಶ್ರೀನಿವಾಸ ಮುರಾರೇ
ದೋಷ ರಹಿತ ಕ್ಲೇಶನಾಶಕನೆಂದು
ಮೋಸಗೊಳಿಪ ಭವ ಪಾಶವ ಖಂಡಿಪ
ಶ್ರೀಶಪುರಂದರ ವಿಠಲನು ಜಗಕಿರೆ

- ಪುರಂದರದಾಸರು.

ಪುರಂದರ ದಾಸರು ಇನ್ನೊಂದು ಪದ್ಯದಲ್ಲಿ ಮನವ ನಿಲ್ಲಿಸುವುದು ಕಷ್ಟ ಎಂದು ಹೇಳಿದ್ದಾರೆ.

ಮನ ನಿಲ್ಲಿಸುವುದು ಕಷ್ಟ ಹರಿದಾಡುವಂತ
ಮನವ ನಿಲ್ಲಿಸುವುದು ಬಹುಕಷ್ಟ

ಭಗವದ್ಗೀತೆಯಲ್ಲಿ ಇದೇ ಕಷ್ಟವನ್ನು ಅರ್ಜುನನು ಶ್ರೀಕೃಷ್ಣನಲ್ಲಿ ತೋಡಿಕೊಳ್ಳುತ್ತಾನೆ.

ಚಂಚಲಂ ಹಿ ಮನಂ ಕೃಷ್ಣ ಪ್ರಮಾಥಿ ಬಲವದ್ದೃಡಂ
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ

ಶ್ರೀಕೃಷ್ಣನು ಇದಕ್ಕೆ ಉತ್ತರವಾಗಿ ಹೇಳುತ್ತಾನೆ-

ಅಸಂಶಯಂ ಮಹಾಬಾಹೋ ಮನೋದುರ್ನಿಗ್ರಹಂ ಚಲಂ
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ

ಮನಸ್ಸು ಸ್ವಾಧೀನಪಡಿಸಿಕೊಳ್ಳಲು ಅಶಕ್ಯವಾದರೂ ಕ್ರಮಕ್ರಮವಾಗಿ ಅಭ್ಯಾಸ ಮಾಡುವುದರಿಂದ ವಿಷಯಗಳಲ್ಲಿ ಸ್ನೇಹ ಬಿಡುವುದರಿಂದ ಅದು ಸಾಧ್ಯವಾಗುತ್ತದೆ. ಇದನ್ನೇ ಪುರಂದರದಾಸರು ಒಂದು ಕೀರ್ತನೆಯಲ್ಲಿ ಹೀಗೆ ತಿಳಿಸಿದ್ದಾರೆ.

ಮನವ ಶೋಧಿಸಬೇಕು ನಿಚ್ಚಾ ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ

ಧರ್ಮ ಅಧರ್ಮ ವಿಂಗಡಿಸಿ ಅ
ಧರ್ಮ ನರಗಳ ಬೇರ ಕತ್ತರಿಸಿ
ನಿರ್ಮಲಾಚಾರದಿ ಚರಿಸಿ ಪರ
ಬೊಮ್ಮ ಮಾರುತಿಯ ಪಾದಕಮಲವ ಭಜಿಸಿ

ತನುವ ಖಂಡಿಸಿ ಒಮ್ಮೆ ಮಾಣೋ ನಿನ್ನ
ಮನವ ದಂಡಿಸಿ ಪರಮನ್ನ ಕಾಣೋ
ಕೊನೆಗೆ ನಿನ್ನೊಳಗೆ ನೀ ಜಾಣೋ ಮುಕ್ತಿ
ನಿನಗೆ ದೂರಿಲ್ಲವು ಒಂದೇ ಗೇಣೋ

ಆತನವರಿಗೆ ಕೇಡಿಲ್ಲ ಅವ
ಪಾತಕ ಪತಿತ ಸಂಗ ಮಾಡುವವನಲ್ಲ
ನೀತಿವಂತರು ಕೇಳಿರೆಲ್ಲ ನಮ
ಗಾತನೆ ಗತಿಯೀವ ಪುರಂದರವಿಠಲ

ಅವರೇ ತಮ್ಮ ಇನ್ನೊಂದು ಪದ್ಯದಲ್ಲಿ ಮನಸ್ಸಿಗೆ ನೀಡಿರುವ ಶಿಕ್ಷಣದ ರೀತಿ ಹೀಗಿದೆ-

ಬೇಡ ಮನವೆ ಬೇಡಿಕೊಂಬೆನು ನಾನು
ಕಾಡದಿರು ಕಪಟದಿ ಮನವೆ

ವಂದನೆಯ ಮಾಡಿ ಗುರುಹಿರಿಯರ ಪಾದಗಳ
ಕಂಡು ನೀ ಶುಚಿಯಾಗು ಮನವೇ
ತಂದೆ ಶ್ರೀ ಪುರಂದರ ವಿಠಲನ ಪಾದವ
ಪೊಂದಿ ಸುಖಿಯಾಗು ಹೇ ಮನವೇ

॥ ಮಧ್ವೇಶಾರ್ಪಣಮಸ್ತು ॥

(ಸಂಪೂರ್ಣಂ)



ಅನ್ಯ ವಿಷಯಕ್ಕೆ ಎಳಸದಿರು ಮನವೆ.

# ತಿರುಮಲೆ - ತಿರುಪತಿ - ತಿರುಚಾನೂರು

ಮೂಲ : ಡಾ|| ಎಂ. ರಾಮರಾವ್ ಎಂ.ಎ.ಪಿಹೆಚ್.ಡಿ.

ಅನುವಾದ : ಎಸ್. ವಿ. ಹೇಮಾವತಿ ಎಂ.ಎ., ಬಿ.ಎಡ್.

(ಮುಂದುವರೆದದ್ದು)

## ತಿರುಮಲೆಯ ಆಲಯ ಇತಿಹಾಸ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯವು ಯಾರಿಂದ ಎಂದು ನಿರ್ಮಾಣ ವಾಯಿತು ಎಂದು ತಿಳಿಸುವ ಖಚಿತವಾದ ಆಧಾರಗಳಾವುವೂ ಇಲ್ಲ. ಹದಿಮೂರನೆಯ ಶತಮಾನದಲ್ಲಿ ಯಾತ್ರಿಕ ಭಕ್ತರೊಬ್ಬರಿಂದ ಜೀರ್ಣೋದ್ಧಾರವಾಗಿರುವುದರಿಂದ ವಾಸ್ತು ಶಿಲ್ಪದ ಆಧಾರದಿಂದಾಗಿ ಯಾವುದೇ ನಿರ್ಣಯಕ್ಕೂ ನೆರವು ಸಿಗದು. ಹದಿ ಮೂರನೆಯ ಶತಮಾನದಲ್ಲಿ ಮೊದಲಿದ್ದ ಆಲಯವನ್ನು ಪುನಾರಚನೆ ಅಥವಾ ಹೊಸರಚನೆಯಿಂದ ಪೂರ್ಣಗೊಳಿಸಿರಬೇಕು. ಕ್ರಿಸ್ತಶಕಾದಿಯ ಶತಮಾನಗಳ ತಮಿಳು ಸಂಗಂ ಸಾಹಿತ್ಯದಲ್ಲಿ ತಿರುಮಲೆಯ ಉಲ್ಲೇಖವಿದ್ದರೂ ಇಲ್ಲಿನ ದೇವರ ಬಗ್ಗೆ ಮೌನವಿದೆ. ನಾಲಾಯಿರ ಪಾಶುರಗಳ ರಚನೆ ಮಾಡಿದ ಆಳ್ವಾರರು ಈ ದೇವರನ್ನು ಕೃಷ್ಣ, ರಾಮ, ವಾಮನ, ತ್ರಿವಿಕ್ರಮ ಎಂದೆಲ್ಲಾ ದಶಾವತಾರಗಳಿಂದ ಗುರುತಿಸಿ; ಶಿವನೊಡನೆಯೂ ಕೂಡಿಸಿ ಹೇಳಿದ್ದರೂ ಇಲ್ಲಿನ ಆಲಯದ ಬಗ್ಗೆ ಏನೂ ಹೇಳಿಲ್ಲ. ತಿರುಮಳಿಶೈ ಆಳ್ವಾರರ ಪಾಶುರಗಳಿಂದ ಅವರು ತಿರುಮಲೆಗೆ ಆಗಮಿಸಿದಾಗ ಒಂದು ಬಯಲು ಮಂಟಪದಲ್ಲಿ ಸ್ವಾಮಿಯ ವಿಗ್ರಹವಿದ್ದಂತೆ ತೋರುತ್ತದೆ. ಅನಂತರ ಕುಲಶೇಖರ ಆಳ್ವಾರರ ಕಾಲಕ್ಕೆ ಇಲ್ಲೊಂದು ಗುಡಿಯಿದ್ದರಬಹುದು. ತಿರು ವೆಂಗಡ ಮುಡೈಯಾನ್ ಅಥವಾ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಾತಿನಿಧಿಕ ಆಲಯವೊಂದು ತಿರುಚಾನೂರು ಗ್ರಾಮದಲ್ಲಿ ಒಂಭತ್ತನೇ ಶತಮಾನದಲ್ಲಿದ್ದಂತೆ ತಿಳಿದು ಬರುತ್ತದೆ. ಹತ್ತನೆಯ ಶತಮಾನದ ಮೊದಲರ್ಧ ಭಾಗದಲ್ಲಿಯೂ ಇದೇ ಪರಿಸ್ಥಿತಿ ಮುಂದು ವರೆಯಿತು. ತಿರುಮಲೆಯಲ್ಲಿ ಕಂಡುಬರುವ ಅತಿ ಪ್ರಾಚೀನ ಶಾಸನವು ಒಂಭತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಸಿದ್ಧ ಆದಂತಹ ಬಾಣ ರಾಜಕುಮಾರ ವಿಜಯಾದಿತ್ಯನ ಜನನವನ್ನು ಸೂಚಿಸುತ್ತದೆ. (1-3) ಈ ರಾಜಕುಮಾರನು ತಿರುಚಾನೂರಿನ ಶ್ರೀ ವೆಂಕಟೇಶ್ವರಸ್ವಾಮಿಗೆ ಒಂದು ದಾನ ನೀಡಿದನು (1-4).

**ಚೋಳರ ಕಾಲ :** ಒಂಭತ್ತನೆಯ ಶತಮಾನದಲ್ಲಿ ಚೋಳರು ತೊಂಡ ಮಂಡಲವನ್ನು ಹಿಡಿದಾಗ ಬಹಳಷ್ಟು ಬದಲಾವಣೆಗಳುಂಟಾಗಿ ವೆಂಗಡದ ಬೆಟ್ಟದ ಆಲಯವು ಪ್ರಸಿದ್ಧಿಯನ್ನು ಪಡೆದು ಪ್ರಚಲಿತವಾಯಿತು. ಎರಡನೇ ಆದಿತ್ಯ ಅಥವಾ ಪಾರ್ಥಿವೇಂದ್ರ ವರ್ಮನ ತೊಂಡಮಂಡಲದ ರಾಜ್ಯಪಾಲಿಕೆಯ ಕಾಲದಲ್ಲಿ ಆಲಯದಲ್ಲಿ ಒಂದು ಮಹತ್ವದ ಘಟನೆಯ ದಾಖಲೆಯನ್ನು ಕಾಣಬಹುದು. ಕ್ರಿ.ಶ. 970 ರಲ್ಲಿ ಕಾಡವನ್ ಪೆರುಂದೇವಿಯೆಂದು ಹೆಸರಾದ ಸಾಮವೈ ರಾಣಿಯು ಇಲ್ಲಿನ ದೇವರಿಗೆ ವಿಶೇಷವಾದ ಪೂಜೆಗಳನ್ನು ನೆರವೇರಿಸಿ ದೇವರಂತೆಯೇ ಇದ್ದಂತಹ ಒಂದು ರಜತ ವಿಗ್ರಹವನ್ನು ಮಾಡಿಸಿ ಆಲಯದಲ್ಲಿ ಉತ್ಸವಗಳನ್ನು ನಡೆಸಲೆಂದು ಸ್ಥಾಪಿಸಿದಳು. ಮಣವಾಳಪ್ಪೆರುಮಾಳ್ ಎಂದು ಕರೆದ ಈ ವಿಗ್ರಹಕ್ಕೆ ಬಹು ಬೆಲೆ ಬಾಳುವ ಕಿರೀಟ, ಹಾರಗಳು, ಉದರ ಬಂಧ, ತಿರುಮುರೈ ಪಟ್ಟಿಕೆ, ಬಾಹುವಲಯ, ಕಂಕಣ ಕಡಗ, ಪಾದಕವಚ, ಪ್ರಭಾವಳಿ - ಮೊದಲಾದ





ಆಭರಣಗಳನ್ನು ಸಮರ್ಪಿಸಿದಳು. ದೇವರಿಗೆ ಪ್ರತಿನಿತ್ಯ ನಿವೇದನೆಗೂ ಆಯನ ಸಂಕ್ರಾಂತಿಗಳಲ್ಲಿ ವಿಷ್ಣು ಸಂಕ್ರಾಂತಿಗಳಲ್ಲಿ ದೇವರ ತಿರುಮಂಜನಕ್ಕೂ ಪುರಟ್ಟಾಸಿ ತಿಂಗಳಲ್ಲಿ ಒಂಭತ್ತು ದಿನಗಳ ಉತ್ಸವ ನಿರ್ವಹಣೆಗೂ (ಈ ನವರಾತ್ರಿ ಉತ್ಸವಗಳು ಚಿತ್ರಾ ನಕ್ಷತ್ರಗಳಲ್ಲಿ ಅಂಕುರಾರ್ಪಣೆಯಿಂದ ಆರಂಭವಾಗ ಬೇಕಿತ್ತು.) ಇದಕ್ಕೂ ಮೊದಲು ಎರಡು ದಿನದ ಉತ್ಸವಕ್ಕೂ ಏರ್ಪಾಡು ಮಾಡಿದಳು. ಪ್ರತಿವರ್ಷ ಮುಕ್ಕೋಟಿ ದ್ವಾದಶಿಯ ಮೊದಲು ಏಳು ದಿನಗಳಲ್ಲಿ ಬೆಳಿಗ್ಗೆ ಸಾಯಂಕಾಲಗಳಲ್ಲಿ ಮಣವಾಳಪ್ಪೆರುಮಾಳರಿಗೆ ನಡೆಸುವ ಉತ್ಸವಗಳಿಗೆ ಎಂದು ಒಂದು ಭೂಮಿಯನ್ನೂ ಸಹ ದಾಮಾಡಿದಳು (1-9) ಮುಂದಿನ ದಾಖಲೆಯೆಂದರೆ ಒಂದನೇ ರಾಜರಾಜ ಚೋಳನ ಆಡಳಿತದ 16ನೇ ವರ್ಷದ ಶಾಸನ. ಇದರಲ್ಲಿ ಹೇಳುವಂತೆ ಎರಡನೇ ಪರಾಂತಕನ ರಾಣಿ ಪರಾಂತಕದೇವಿ ಅಮ್ಮನ್ ಶ್ರೀ ವೆಂಕಟೇಶ್ವರಸ್ವಾಮಿಗೆ 52 ಕಳಂಜುಗಳ ತೂಕದ ಚಿನ್ನದಲ್ಲಿ ನಾಲ್ಕು ವಜ್ರಗಳು ಇಪ್ಪತ್ನಾಲ್ಕು ಮುತ್ತುಗಳು ಮತ್ತು ಆರು ಮಾಣಿಕ್ಯಗಳನ್ನು ಸೇರಿಸಿ ಮಾಡಿದ ಒಂದು ಪಟ್ಟವನ್ನು ಸಮರ್ಪಿಸಿದಳು. ರಾಜೇಂದ್ರ ಚೋಳನ ಆಡಳಿತದ ಮೊದಲನೆಯ ವರ್ಷದಲ್ಲಿ ಸ್ಥಳೀಯ ಅಧಿಕಾರಿಯೊಬ್ಬನು ತಿರುಮಂಡೆಯಂ ಗ್ರಾಮ ಸಭೆಯ ಸದಸ್ಯರು ಒಪ್ಪಿಕೊಂಡಂತೆ ತಿರುಮಲೆಯ ಆಲಯದಲ್ಲಿ 24 ತೈಲ ದೀಪಗಳನ್ನೂ ಒಂದು ಕರ್ಪೂರ ಆರತಿಯನ್ನು ಪ್ರತಿದಿನವೂ ಬೆಳಗುತ್ತಿರುವುದರಲ್ಲಿ ವ್ಯತ್ಯಯವಾಗಿದೆಯೆಂಬ ದೂರನ್ನು ವಿಚಾರಿಸಿ ಅದರ ಪರಿಹಾರ ರೂಪದ ನ್ಯಾಯ ತೀರ್ಮಾನ ಮಾಡಿದನು (1-19). ಒಂದನೇ ಕುಲೋತ್ತುಂಗನ ರಾಣಿಯು ಆಲಯದಲ್ಲಿ ಕ್ಷೀರಾನ್ನ ಹಾಗೂ ದಧ್ಯೋದನಗಳ ನೈವೇದ್ಯಕ್ಕೆ ಏರ್ಪಾಡು ಮಾಡಿದಳು (1-27).

**ಪಾಂಡ್ಯರು :** ತಿರುಮಲೆಯ ಆಲಯದಲ್ಲಿ ಸುಂದರ ಪಾಂಡ್ಯನ ಕಾಲಕ್ಕೆ ಸೇರಿದ ಹಲವು ಶಾಸನಗಳಿವೆ. (1-44 ರಿಂದ 56) ಇವುಗಳಲ್ಲಿ ಯಾವುದೇ ಆಸಕ್ತಿ ಕೆರಳಿಸುವ ಸಂಗತಿಗಳು ವರದಿಯಾಗಿಲ್ಲ. ಸುಂದರ ಪಾಂಡ್ಯನು ಈ ಭಾಗದಲ್ಲಿ ಯುದ್ಧದಲ್ಲಿ ಸೋಲಿಸಿದ ತೆಲುಗು ಪಲ್ಲವರು, ತೆಲುಗು ಚೋಳರ, ಯಾದವರಾಯರ ಬಗ್ಗೆ ವಿವರಗಳನ್ನು ನೀಡುತ್ತವೆ.

**ಯಾದವರಾಯರು :** ಮೊದಲಿಗೆ ಚೋಳರ ಸಾಮಂತರಾಗಿಯೂ, ನಂತರ ಪಾಂಡ್ಯರ ಅಧೀನರಾಜರಾಗಿಯೂ ನಂತರ ಸ್ವತಂತ್ರ ರಾಗಿಯೂ ತೊಂಡಮಂಡಲದ ಈ ಭಾಗವನ್ನು ಆಳಿದ ಯಾದವರಾಯರು ಶ್ರೀ ವೆಂಕಟೇಶ್ವರ ಸ್ವಾಮಿಯ ಹಿರಿಯ ಭಕ್ತರಾಗಿದ್ದರು. ತಿರುಮಲೆಯ ಆಲಯದೊಡನೆ ಮೊತ್ತ ಮೊದಲಿಗೆ ತನ್ನ ಹೆಸರನ್ನು ಜೋಡಿಸಿಕೊಂಡ ಈ ವಂಶದ ಅರಸನೆಂದರೆ ವೀರನರಸಿಂಗ ಯಾದವರಾಯ. ಈತನು ಆಲಯದಲ್ಲಿ ದೈನಂದಿನ ಪೂಜೆಗೆ ಬೇಕಾದ ಅಕ್ಕಿ, ತರಕಾರಿ, ತುಪ್ಪಗಳಿಗಾಗಿ ಒಂದು ಗ್ರಾಮವನ್ನು ದಾನಮಾಡಿದ್ದಾನೆ (1-44). ನಂತರ ಬಂದ ತಿರುಕಾಳತ್ತಿ ದೇವನು ಅವಿಲಾಲ ಗ್ರಾಮವನ್ನು ಆಲಯಕ್ಕೆ ದಾನಮಾಡಿದ (1-82). ವೀರ ನರಸಿಂಗದೇವ ಯಾದವರಾಯನ ರಾಣಿಯು ಆಲಯದಲ್ಲಿ ನಂದಾದೀಪಕ್ಕೆ ಬಳಸಲು ತುಪ್ಪಕ್ಕಾಗಿ 64 ಹಸುಗಳೂ ಎರಡು ಗೂಳಿಗಳನ್ನು ದಾನಮಾಡಿದಳು (1-84). ವೀರ ನರಸಿಂಗಯಾದವರಾಯನ ಕಾಲದಲ್ಲಿ ಈ ಆಲಯವನ್ನು ಸಂದರ್ಶಿಸಿದ ತಿರುಪುಲ್ಲಾಣಿ ದಾಸನೆಂಬ ಯಾತ್ರಿಕನು ರಾಜನ ಅನುಮತಿಯನ್ನು ಪಡೆದು ಆಲಯದ ಜೀರ್ಣೋದ್ಧಾರ ಮಾಡಿಸಿದನು (1-88). ಈ ಶ್ರೀಮಂತನು ತಿರುಮಲೆಯಲ್ಲಿ ತುಲಾಭಾರ ಮಾಡಿಸಿಕೊಂಡು, ವೆಂಕಟಗಿರಿಯನ್ನು ಮೇರು ಸಮ ಎಂಬಂತಾಗಿಸಿದನು. ಈ ವಂಶದ ಮತ್ತೊಬ್ಬ ಶ್ರೀಮಂತ - ತಿರುವೆಂಕಟನಾಥನು ಆಲಯದಲ್ಲಿ ಆಡಿ ತಿರುನಾಳ್ ಉತ್ಸವವನ್ನು ನಡೆಸಲು ಒಂದು ಗ್ರಾಮವನ್ನು ಸರ್ವಮಾನ್ಯವನ್ನಾಗಿ ನೀಡಿದನು. ಈತನ ಮಾವನೂ ಮಹಾಪ್ರಧಾನಿಯೂ ಆಗಿದ್ದ ಸಿಂಗಯ ದಂಡನಾಯಕನು ಆಲಯದಲ್ಲಿ ಸಿತಕರ ಗಂಡ ಸಂಧಿಯ ನೈವೇದ್ಯವನ್ನು ಏರ್ಪಾಡುಮಾಡಿದನು (1-102). ಈ ವಂಶದ ಮತ್ತೊಬ್ಬ ಅರಸ ಶ್ರೀರಂಗನಾಥನ ಆಡಳಿತದ ಮೂರನೆಯ ವರ್ಷದ ಒಂದು ಶಾಸನವು ತಿರುಮಲೆಯ ಪುಷ್ಪೋದ್ಯಾನಗಳು, ಮಠಗಳ ಬಗ್ಗೆ ಹೇಳುತ್ತ ಶ್ರೀ ವೆಂಕಟೇಶ್ವರ ಸ್ವಾಮಿಯ ಪಾರ್ವೇಟೆ (ಹಾರು ಬೇಟೆ) ಉತ್ಸವವನ್ನು ಉಲ್ಲೇಖಿಸಿರುವುದು (1-106). ಹದಿನಾಲ್ಕು ವರ್ಷಗಳ ನಂತರದ ಮತ್ತೊಂದು ಶಾಸನವು ಮಲೈ ಕುನಿಯ ನಿನ್ರ ಪೆರುಮಾಳರನ್ನು ಉಭಯ ನಾಚ್ಚಿಯಾರರನ್ನು ಹೆಸರಿಸುತ್ತದೆ. ಹೋಬಳ ಯಾದವರಾಯನು ಸ್ವಾಮಿಯ ಹಸ್ತಕ್ಕೆ ಕವಚವನ್ನು - ಬಲಗಡೆಯ ಕೆಳಭಾಗದ ಹಸ್ತ - ವರದ ಹಸ್ತವೇ ಆಗಿರಬೇಕು - ಮಾಡಿಸಿ ನೀಡಿದ.

**ವಿಜಯನಗರ ಕಾಲ :** ದಕ್ಷಿಣ ಭಾರತದ ಸಾಂಸ್ಕೃತಿಕ ಧಾರ್ಮಿಕ ಚರಿತ್ರೆಯಲ್ಲಿ ಕ್ರಿ.ಶ. 1336 ರಲ್ಲಿ ಆದ ವಿಜಯನಗರ ರಾಜ್ಯಸ್ಥಾಪನೆ ಒಂದು ಮುಖ್ಯವಾದ ತಿರುವು. ಹದಿನಾಲ್ಕನೆಯ ಶತಮಾನದ ಮೊದಲ ಮೂರು ದಶಮಾನದಲ್ಲಿ ಈ ಭಾಗದ ಆಲಯಗಳೂ, ದೇವವಿಗ್ರಹಗಳೂ ಮುಸಲ್ಮಾನರ ಪದೇ ಪದೇ ದಾಳಿಗಳಿಂದಾಗಿ ತೀವ್ರವಾದ ಏಳು-ಬೀಳುಗಳನ್ನು ಕಾಣ ಬೇಕಾಯಿತು. ಹೊಸದಾಗಿ ಸ್ಥಾಪನೆಯಾದ ಹಿಂದೂ ಸಾಮ್ರಾಜ್ಯವು ಒಳ್ಳೆಯ ರಕ್ಷಣೆಯನ್ನೂ, ಅಭಿವೃದ್ಧಿಯ ಆಶ್ರಯವನ್ನು ನೀಡಿತು. ತಿರುಮಲೆಯ ಆಲಯವು ವಿಜಯನಗರವನ್ನು ಆಳಿದ ಎಲ್ಲ ರಾಜವಂಶಗಳ ಅತ್ಯಾದರ ಗೌರವಗಳಿಗೆ ಪಾತ್ರವಾಗಿ ಹಿಂದೆಂದೂ ಕಾಣದಷ್ಟು ಸಮೃದ್ಧಿಯನ್ನು ಪ್ರಸಿದ್ಧಿಯನ್ನು ಕಂಡಿತು.

**ಸಂಗಮ ವಂಶ :** ತಿರುಮಲೆಯ ಶಾಸನಗಳಲ್ಲಿ ಕಂಡು ಬರುವ ಮೊದಲನೆಯ ರಾಜನೆಂದರೆ ಒಂದನೇ ಬುಕ್ಕ ಮಹಾರಾಯ. ಈತನು ದೇವರ ನೈವೇದ್ಯಕ್ಕೆಂದು ಎರಡು ಗ್ರಾಮಗಳನ್ನು ದಾನ ಮಾಡಿದನು (1-178).

ಪ್ರಮುಖ ಪಾಳಯಗಾರನಾದ ಮಹಾ ಮಂಡಳೇಶ್ವರ ಮಂಗಿದೇವನು ಕ್ರಿ.ಶ. 1369 ರಲ್ಲಿ ಆಲಯ ವಿಮಾನಕ್ಕೆ ಚಿನ್ನದ ಮುಲಾಮಿನ ತಗಡು ಹೊದಿಸಿ ಅದರ ಮೇಲೆ ಚಿನ್ನದ ಕಲಶವನ್ನು ಸ್ಥಾಪಿಸಿದನು (1-180). ಹರಿಹರ ರಾಯನ ಆಡಳಿತದ ಕಾಲದಲ್ಲಿ ಆತನ ಹೆಸರಿನಲ್ಲಿ ಮಾಸಿ ತಿರುನಾಳ್ ಉತ್ಸವವನ್ನು ಮುಲ್ಲೈ ತಿರುವೆಂಕಟಜೀಯರು ಆರಂಭಿಸಿದರು. (1-185) ಕ್ರಿ.ಶ. 1390 ರ ಒಂದು ದಾಖಲೆಯು ಸ್ವಾಮಿಯ ಮತ್ತು ಉಭಯ ನಾಯಕಿಯರ ಮೆರವಣಿಗೆಯಲ್ಲಿ ತಿರುಪ್ಪಾವೈ ಪಾಶುರಗಳನ್ನು ಹಾಡುತ್ತಿದ್ದರೆಂದು ವಿವರಿಸುತ್ತದೆ (1-187). ಮೂರು ವರ್ಷದ ನಂತರದ ಇನ್ನೊಂದು ಶಾಸನವು ತಿರುಮಲೆಯಲ್ಲಿ ಉತ್ಸವಗಳ ವಿದ್ಯೈಯಾತ್ರಿ ದಿನವನ್ನು ಉಲ್ಲೇಖಿಸುವುದು (1-190). ಕ್ರಿ.ಶ. 1404 ರ ಶಾಸನವು ಕೋಡೈ ತಿರುನಾಳ್ ಉತ್ಸವವನ್ನು ವಿವರಿಸುತ್ತದೆ. ಎರಡನೆಯ ದೇವರಾಯನು ಕ್ರಿ.ಶ. 1429 ರಲ್ಲಿ ಉತ್ಥಾನ ದ್ವಾದಶಿ ಉತ್ಸವಕ್ಕೆ ಏರ್ಪಾಡು ಮಾಡಿದನು. ಈ ಉತ್ಸವವು ಆಶ್ವಯುಜ ಮಾಸದ ಪುನರ್ವಸು ನಕ್ಷತ್ರದ ದಿನದಂದು ಆರಂಭವಾಗಿ ಸ್ವಾತಿ ನಕ್ಷತ್ರದ ದಿನದಲ್ಲಿ ಮುಗಿಯುವಂತಿದ್ದಿತು. ಈ ಉತ್ಸವ ಕಾಲದಲ್ಲಿ ಸ್ವಾಮಿಯ ವಿಗ್ರಹಕ್ಕೆ ಪುನುಗು ಲೇಪನ ಮಾಡಬೇಕೆಂದು ವ್ಯವಸ್ಥೆ ಮಾಡಲಾಯಿತು (1-193). ಚಂದ್ರಗಿರಿಯ ನಿವಾಸಿ ಮಾಧವದಾಸನು ಕ್ರಿ.ಶ. 1417 ರಲ್ಲಿ ತಿರುಮಲೆಯ ಆಲಯದಲ್ಲಿನ ತಿರುಮಾಮಣಿ ಮಂಟಪವನ್ನು ನಿರ್ಮಿಸಿಕೊಟ್ಟನು. ಈ ಕಾಲದ ಒಂದು ತ್ರುಟಿತ ಶಾಸನದಲ್ಲಿ ಮಾಧವದಾಸನು ಮಾಡಿದ ಆಲಯ ದುರಸ್ತಿ ಕಾರ್ಯವನ್ನು, ಆಲಯ ವಿಮಾನದ ಅಲಂಕರಣವನ್ನೂ ಉಲ್ಲೇಖಿಸಲಾಗಿದೆ (1-198). ಎರಡನೆಯ ದೇವರಾಯನ ಮತ್ತೊಂದು ಘನವಾದ ಕಾರ್ಯವು ನಾಲ್ಕು ಶಾಸನಗಳಲ್ಲಿ ದಾಖಲೆಯಾಗಿದೆ. ತಿರುಮಲೆಯ ಆಲಯದಲ್ಲಿ ಪ್ರತಿನಿತ್ಯವೂ ಮಾಡುವ ವೇದಪಾರಾಯಣವು ಹಲವು ಕಾಲದಿಂದ ನಿಂತು ಹೋಗಿದ್ದಿತೆಂದು ತೋರುತ್ತದೆ. ಅಳಗಿಯಪ್ಪಿರನಾರ್ ಎಂಬ ಒಬ್ಬಾತನು ಇದನ್ನು ರಾಜನ ಗಮನಕ್ಕೆ ತಂದು ನಿಂತು ಹೋಗಿದ್ದ ಪದ್ಧತಿಯನ್ನು ಪುನಃ ಆರಂಭಿಸಿ ನಡೆಸಬೇಕೆಂದು ಬೇಡಿದನು. ರಾಜನಿಂದ ಒಂದು ಗ್ರಾಮದ ಅರ್ಧಭಾಗದ ಆದಾಯವನ್ನು ವೇದ ಪಾರಾಯಣ ಮಾಡುವವರಿಗೆ ಸಂಭಾವನೆಯಾದ ಶ್ರೋತ್ರೀಯವೆಂದು ಪಡೆದು ಅದನ್ನು ವೇದ ಪಾರಾಯಣ ಮಾಡುವ ಇಪ್ಪತ್ತನಾಲ್ಕು ಮಂದಿ ಬ್ರಾಹ್ಮಣರಿಗೆ ನೀಡಿದನು. ನಂತರ ಇದೇ ಕಾರಣಕ್ಕಾಗಿ 200 ಪಣವನ್ನು ನೀಡಿದನು (1-199). ದೇವರ ಮುಂದೆ ಇಬ್ಬರು ಬ್ರಾಹ್ಮಣರು ಪ್ರತಿನಿತ್ಯವೂ ವೇದಪಾರಾಯಣ ಮಾಡಬೇಕೆಂದು ಕಟ್ಟಳೆಯಾಯಿತು. (1-200-204). ಕ್ರಿ.ಶ. 1445 ರ ಒಂದು ಶಾಸನವು ಆ ದಿನಗಳಲ್ಲಿ ವರ್ಷಕ್ಕೆ 9 ಸಾರಿ ನಡೆಯುತ್ತಿದ್ದ ತಿರುಕ್ಕೊಡಿ ತಿರುನಾಳುಗಳ ಅಂಕುರಾರ್ಪಣದಿನ, ಅಧಿವಾಸ ದಿನ ಹಾಗೂ ತೀರ್ಥವಾರಿ ದಿನಗಳನ್ನು ಉಲ್ಲೇಖಿಸುತ್ತದೆ (1-213). ಮಹಾಮಂಡಲೇಶ್ವರ ಸಿರು ಮಲ್ಲಯದೇವನು ಕ್ರಿ.ಶ. 1450 ರಲ್ಲಿ ರಾಯರ್ ಸಂಧಿಯನ್ನು ಉಂಟುಮಾಡಿದನು (1-128). ಕ್ರಿ.ಶ. 1445 ರಲ್ಲಿ ತಿರುಮಲೆಯ ಆಲಯದಲ್ಲಿ ಬುಕ್ಕರಾಯನ್ ಸಂಧಿ ಉಂಟಾಯಿತು. (1-129). ಕ್ರಿ.ಶ. 1446 ರ ಒಂದು ದಾಖಲೆಯು ಧ್ವಜಾರೋಹಣದಿಂದ ಆರಂಭವಾಗುವ ಆಡಿ ಉತ್ಸವದಿಂದ ಆರಂಭವಾಗಿ ಚಿತ್ತಿರೈ ಉತ್ಸವದಲ್ಲಿ ಕೊನೆಯಾಗುವ ಏಳು ಉತ್ಸವಗಳಲ್ಲಿ ನಡೆಯುತ್ತಿದ್ದ ಪುಷ್ಪಯಾಗದಿನವನ್ನು ಕುರಿತು ಹೇಳುತ್ತದೆ (1-219). ಇದೇ ಶಾಸನವು ಮಂಟಪದಲ್ಲಿ ಉಭಯನಾಯಕಿಯರೊಡನೆ ಆಸೀನನಾದ ಮಲೈಕುನಿಯ ನಿನ್ರ ಪೆರುಮಾಳ್ ತಿರುವಾಯ್‌ಮೊಳಿಯ ಪಾರಾಯಣವನ್ನು ಕೇಳುತ್ತಿದ್ದಂತೆ ಹೇಳುತ್ತದೆ (1-220). ಇದೇ ವರ್ಷದ ಇನ್ನೊಂದು ಶಾಸನವು ಮಲೈಕುನಿಯ ನಿನ್ರಪೆರುಮಾಳರಿಗೆ ತಿರುಮಂಜನವಾದ ಮೇಲೆ ಬಾಹುವಲಯವನ್ನು ತೊಡಿಸಬೇಕೆಂದು ಹೇಳುತ್ತದೆ (1-221). ಒಂದು ವರ್ಷದ ನಂತರದ ಶಾಸನವು ಅಂದಿನ ಕಾಲದಲ್ಲಿ ನಡೆಯುತ್ತಿದ್ದ ಒಂಬತ್ತು ಉತ್ಸವಗಳ (1-222) ಕೈಯರ್ ಚಕ್ರದ ದಿನ (ಚಕ್ರಸ್ನಾನದ ದಿನ)ವನ್ನು ಉಲ್ಲೇಖಿಸುತ್ತದೆ.

**ಸಾಳುವ ವಂಶ :** ಸಾಳುವ ನರಸಿಂಹನ ಹೆಸರಿನಲ್ಲಿ ಒಂದು ನಿವೇದನ ಸಂಧಿಯನ್ನು ಒಂದು ಗ್ರಾಮದ ಸ್ವರ್ಣಾದಾಯ ತೆರಿಗೆಯ ಆದಾಯವನ್ನು ಬಳಸಿ ಮಾಡಬೇಕೆಂದು ಕಟ್ಟಳೆ ಮಾಡಲಾಯಿತು (II-4). ಕ್ರಿ.ಶ. 1461 ರಲ್ಲಿ ಪ್ರತಿ ಶನಿವಾರವೂ ಆಲಯದಲ್ಲಿ ನಂದಾದೀಪವನ್ನು ಹಚ್ಚಲು ಒಬ್ಬದಾನಿಯು ಏರ್ಪಾಡು ಮಾಡಿದನು (II-10). ಕ್ರಿ.ಶ. 1464 ರ ಒಂದು ಶಾಸನದಲ್ಲಿ ತಿರುಪವಿತ್ರ ತಿರುನಾಳ್ ಉತ್ಸವದ ಉಲ್ಲೇಖವಿದೆ (II-18). ಕ್ರಿ.ಶ. 1468 ರ ಒಂದು ಶಾಸನವು ಸಾಳುವ ನರಸಿಂಹನು ಒಂದು ಗೋಪುರವನ್ನು ನಿರ್ಮಿಸಿ, ಅದರ ಬಳಿಯಲ್ಲಿನ ಒಂದು ಸತ್ರದಲ್ಲಿ ಯಾತ್ರಿಕರಿಗೆ ಭೋಜನಾವಕಾಶವನ್ನುಂಟು ಮಾಡಿದನೆಂದು ಹೇಳುತ್ತದೆ (II-34). ಮಾರನೆಯ ವರ್ಷದ ಶಾಸನದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರತಿನಿತ್ಯದ ತೋಮಾಲೆ ಸೇವೆಯ ಹೊತ್ತಿನಲ್ಲಿ ಸ್ವಾಮಿಯ ಪಾದ ತೊಳೆದ ಮೇಲೆ ಮೊಸರನ್ನದ ನಿವೇದನೆಯ ದಧ್ಯೋದನ ಸಂದಿಯನ್ನು ಉಲ್ಲೇಖಿಸಲಾಗಿದ್ದು, ಫಂಗುಣಿ ಅಮಾವಾಸ್ಯೆ, ವಸಂತ ಪೂರ್ಣಿಮೆಯ ದಿನಗಳಲ್ಲಿ ನರಸಿಂಹ ದೇವರಿಗೆ ತಿರುಮಂಜನ ಮಾಡಿಸುವ ಉಲ್ಲೇಖವಿದೆ (II-38). ಪುರಟ್ಟಾಸಿ ತಿರುನಾಳಿನ ಹತ್ತುದಿನಗಳ ಕಾಲವೂ ನರಸಿಂಗರಾಯ ಕೋನೇರಿಯ ಬಳಿ ಒಂದು ಅನ್ನಸತ್ರವನ್ನು ನಡೆಸಲಾಗುತ್ತಿದ್ದಿತೆಂದು ಮತ್ತೊಂದು ಉಲ್ಲೇಖ ತಿಳಿಸುವುದು (II-51). ಸಾಳುವ ನರಸಿಂಹನು ತಿರುಮಲೆಯ ಆಲಯದಲ್ಲಿ ನಿರ್ಮಿಸಿದ ಊಂಜಲ್ ಮಂಟಪದಲ್ಲಿ ಡೋಲ ಮಹೋತ್ಸವ ಅನ್ನಾ ಊಂಜಲ್ ಸೇವೆಯನ್ನು ನಡೆಸುವುದನ್ನು ಕ್ರಿ.ಶ. 1473 ರ ಶಾಸನವು ತಿಳಿಸುತ್ತದೆ. ಕ್ರಿ.ಶ. 1476 ರ ಒಂದು ಶಾಸನವು ಫಂಗುಣಿ ಮತ್ತು ಪುರಟ್ಟಾಸಿ ಉತ್ಸವಗಳಲ್ಲಿನ ರಥೋತ್ಸವಗಳಲ್ಲಿ ಮಲೈಕುನಿಯ ನಿನ್ರ



ಪೆರುಮಾಳರು ವರಾಹಸ್ವಾಮಿಯ ಆಲಯದ ಮಂಟಪಕ್ಕೆ ಬರುತ್ತಿದ್ದುದನ್ನು ಹಾಗೂ ಕನುಪ್ಪಡಿಯ ಸಂದರ್ಭದಲ್ಲಿ ಅರಿಷಿಣದಿಂದ ಲೇಪನವಾದ ಮೇಲೆ ನಾಚ್ಚಿಯಾರರಿಗೆ ತಿರುಮಂಜನವಾಗುತ್ತಿದ್ದ ಸಂಪ್ರದಾಯವನ್ನು ವಿವರಿಸುವುದು (II-68). ಕ್ರಿ.ಶ. 1477 ರ ಒಂದು ಶಾಸನದಲ್ಲಿ ಅಲಮೇಲ್‌ಮಂಗೈ ನಾಚ್ಚಿಯಾರ್ ಸಂಧಿ ಎಂಬ ನಿವೇದನೆಯ ಸಂಧಿ ಗಮನಕ್ಕೆ ಬರುತ್ತದೆ (II-69). ಒಂದು ಒಡಕು ಶಾಸನವು ಪಾಪನಾಶ ಉತ್ಸವವನ್ನು ಉಲ್ಲೇಖಿಸಿರುವುದು (II-71). ಕ್ರಿ.ಶ. 1482 ರ ಒಂದು ಶಾಸನವು ಉತ್ಥಾನ ದ್ವಾದಶಿಯಂದು ಸಾಳುವ ನರಸಿಂಹರಾಯನು ಒಂದು ಗ್ರಾಮವನ್ನು ದಾನ ನೀಡಿದನೆಂದೂ, ಈ ಗ್ರಾಮದ ಆದಾಯವನ್ನು ತಿರುಮಲೆಯಲ್ಲಿ, ತಿರುಪತಿಯಲ್ಲಿ ಗೋಪುರಗಳನ್ನು ನಿರ್ಮಿಸಲೂ, ತಿರುಮಲೆಯ ಆಲಯದ ನರಸಿಂಹರಾಯ ಮಂಟಪದಲ್ಲಿ ಗೋಪುರ ನಿರ್ಮಾಣಕ್ಕೆ ಬಳಸಬೇಕೆಂದೂ ತಿಳಿಸುವುದು (II-79). ಕ್ರಿ.ಶ. 1486 ರ ಒಂದು ಶಾಸನವು ಧನುರ್ಮಾಸದಲ್ಲಿನ ಉತ್ಸವವನ್ನು ಅಥವಾ ತಿರುಪ್ಪಳ್ಳಿ ಎಳುಚ್ಚಿ ಉತ್ಸವವನ್ನು ಮಾರ್ಗಳಿ ತಿಂಗಳಲ್ಲಿ ನಡೆಸುತ್ತಿದ್ದುದನ್ನು ತಿಳಿಸುತ್ತದೆ (II-86). ಮತ್ತೊಂದು ಶಾಸನವು ಉತ್ಥಾನ ದ್ವಾದಶಿಯಂದು ಹಾಗೂ ಶ್ರೀ ಜಯಂತಿಯ ಉತ್ಸವದಲ್ಲಿ ರಥ ಬೀದಿಯಲ್ಲಿ ನಡೆಯುತ್ತಿದ್ದ ಮೆರವಣಿಗೆಯನ್ನು ಕುರಿತು ಹೇಳುತ್ತದೆ (II-91). ಕ್ರಿ.ಶ. 1491 ರ ಕಾಲದ ಒಂದು ಶಾಸನವು ಯುಗಾದಿ ಹಾಗೂ ದೀಪಾವಳಿಯ ದಿನಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೂರ್ಯಚಂದ್ರರನ್ನು ಹೋಲುವಂತಹ ಎರಡು ವರ್ತುಲಾಕಾರದ ಹಾರಗಳ ಅಲಂಕಾರ ಮಾಡುವುದನ್ನು ಕುರಿತು ಹೇಳುತ್ತದೆ (II-94). ಕ್ರಿ.ಶ. 1491 ರಲ್ಲಿನ ಒಂದು ಶಾಸನದಲ್ಲಿ ಮಾರ್ಗಳಿ ಮಾಸದಲ್ಲಿ ನಡೆಯುವ ತಿರುವಧ್ಯಯನದ ಮೊದಲು ಆಕಾಶಗಂಗೆಗೆ ಹೋಗುವ ಮೆಟ್ಟಿಲಹಾದಿಯನ್ನು ದುರಸ್ತಿ ಗೊಳಿಸಿದಂತೆ ದಾಖಲೆಯಾಗಿದೆ (II-95). ಅದೇ ವರ್ಷದ ಮತ್ತೊಂದು ಶಾಸನವು ಮಲೈಕುನಿಯ ನಿನ್ರ ಪೆರುಮಾಳ್ ಹಾಗೂ ನಾಚ್ಚಿಯಾರರು ಎಂಟು ಉತ್ಸವ ದಿನಗಳಲ್ಲಿ ಮಾಡುತ್ತಿದ್ದ ಕುದುರೆ ಸವಾರಿಯ ಬಗ್ಗೆ ತಿಳಿಸುತ್ತದೆ. (II-96). ಎರಡು ವರ್ಷಗಳ ನಂತರದ ಒಂದು ಶಾಸನವು ಶ್ರೀ ಜಯಂತಿ ಉತ್ಸವ, ಶ್ರೀರಾಮನವಮಿ, ಉತ್ಸವ ಹಾಗೂ ವಸಂತ ಪಂಚಮಿಗಳನ್ನು ತಿಳಿಸುತ್ತದೆ (II-101). ಅದೇ ವರ್ಷದಲ್ಲಿ ಕೊಮರರಾಜ ಪೆರಿಯ ತಿರುಮ್ಮರಾಜನ ಪತ್ನಿ ನರಸಮ್ಮನು ಆನಂದಾಂಪಿಳ್ಳೈ ಮಂಟಪವನ್ನು ಪುನರ್ನಿರ್ಮಾಣ ಮಾಡಿಸಿದಳು (II-103).

ಕ್ರಿ.ಶ. 1493 ರ ಒಂದು ಶಾಸನವು ಮಾರ್ಗಳಿ ತಿಂಗಳಿನಲ್ಲಿ ನಡೆಯುತ್ತಿದ್ದ ತಿರುವಧ್ಯಯನ ಉತ್ಸವವನ್ನು ತಿಳಿಸುತ್ತದೆ. (II-107). ಅದೇ ವರ್ಷದ ಮತ್ತೊಂದು ಶಾಸನವು ತಿರುಕ್ಕೊಡಿ ತಿರುನಾಳ್ ಉತ್ಸವದಲ್ಲಿ ನಡೆಯುತ್ತಿದ್ದ ರಥೋತ್ಸವವನ್ನು ತಿಳಿಸುತ್ತದೆ. (II-109). ಕ್ರಿ.ಶ. 1494 ರ ಒಂದು ಶಾಸನವು ಅಂದು ನಡೆಯುತ್ತಿದ್ದ ಅಲ್ಪಸಿ ತಿರುನಾಳ್ ಹಾಗೂ ಮಾಸಿ ತಿರುನಾಳನ್ನು ದಾಖಲಿಸುತ್ತದೆ. ಅದೇ ವರ್ಷದ ಇನ್ನೊಂದು ದಾಖಲೆಯು ಆಡಿ - ಆಯನವನ್ನು ಹೆಸರಿಸುತ್ತ ಶ್ರೀ ವೆಂಕಟೇಶ್ವರಸ್ವಾಮಿಯು ಉತ್ಥಾನ ಏಕಾದಶಿಯಂದು (ಚಾತುರ್ಮಾಸದ ಅವಧಿ ಯಲ್ಲಿ ಬರುವಂಥದು) ಕೈಶಿಕ ಪುರಾಣವನ್ನು ಕೇಳುತ್ತಿದ್ದನೆಂದು ತಿಳಿಸುತ್ತದೆ. ಕ್ರಿ.ಶ. 1495 ರ ಒಂದು ಶಾಸನವು ಆಲಯದಲ್ಲಿನ ಶ್ರೀ ಭಂಡಾರದ ಬಂಗಾರ ಬೆಳ್ಳಿ ಪಾತ್ರಗಳ ಹಾಗೂ ಆಭರಣಗಳ ದುರಸ್ತಿ ಮಾಡಲು ಕಂದಾಡೆ ರಾಮಾನುಜ ಅಯ್ಯಂಗಾರ್ಯನಿಗೆ ಸಾಳುವ ನರಸಿಂಹರಾಯನು ಆಜ್ಞೆ ನೀಡಿದನೆಂದು ತಿಳಿಸುತ್ತದೆ (II-133). ನಂತರದ ಒಂದು ಶಾಸನವು ನವಲೂರು ಮಂಟಪಕ್ಕೆ ಬಂದಂತಹ ಸ್ವಾಮಿಯ ಮೆರವಣಿಗೆಯನ್ನು ಅದರಲ್ಲಿ ಭಾಗವಹಿಸಿದ ಆಲಯದ ಅಧಿಕಾರ ಪರಿಚಾರಕ ವರ್ಗವನ್ನು ವಿವರಿಸುತ್ತದೆ. ತಿರುಪ್ಪಣಿ ಪಿಳ್ಳೈ ಲಚ್ಚಿನಾಯಕ್ಕರಾರ್, ಪ್ರಬಂಧ ಪಾಠಕರು, ಕಂಗಾಣಿಯಪ್ಪನ್, ವಾಹನ ಹೊರುವವರು, ಅಧಿಕಾರಿ ಪಚ್ಚಡಿಕಾರರ್, ದೀಪಾಲಿ, ವಿನ್ನಪಂ ಸೇಯುವಾರ್, ಕಟ್ಟಿಗೆ ತರುವವನು, ಉಳಾವಿ ಹೇಳುವವನು, ನರ್ತನಾಧಿಕಾರಿ, ಪಂಚಾಂಗಕಾರ, ನರ್ತಕರು, ಮೇಳದವರು, ಗಾಯಕರು ಬಡಗಿ, ಕುಂಬಾರ, ಶಿಲ್ಪಿ, ದ್ವಾರಪಾಲಕರು ಇದ್ದರು ಎಂದು ಹೇಳುತ್ತದೆ (II-135). ಹದಿನೈದು ದಿನಕ್ಕೆ ಒಮ್ಮೆ ಶುಕ್ರವಾರಗಳ ದಿನ ಸ್ವಾಮಿಗೆ ಹಾಗೂ ವಕ್ಷಃಸ್ಥಲದ ಅಲಮೇಲು ಮಂಗೈಗೆ ಪುಲುಗು ಕಾಪ್ಪುಮುರ್ರೈ ಸೇವೆಯಲ್ಲಿ ಪುನುಗು ಹಚ್ಚುತ್ತಿದ್ದುದನ್ನು ಕ್ರಿ.ಶ. 1496 ರ ಒಂದು ಶಾಸನ ವಿವರಿಸುತ್ತದೆ (II-136). ಕ್ರಿ.ಶ. 1504 ರ ಒಂದು ಶಾಸನ ಸಂಪಕಚ್ಚರುವಿನ ರಾಯರ್ ಮಂಟಪದ ಉಲ್ಲೇಖ ಮಾಡುತ್ತದೆ (II-138).

**ತುಳುವ ವಂಶ :** ಈ ವಂಶದರಸರ ಉದಾರವಾದ ಸಮರ್ಪಣೆಗಳನ್ನು ಆಲಯವು ಪಡೆದಿತು. ಈ ವಂಶದ ಪ್ರಸಿದ್ಧರಾಜರಾದ ಕೃಷ್ಣದೇವರಾಯ ಮತ್ತು ಅವನ ತಮ್ಮ ಅಚ್ಯುತದೇವರಾಯರಿಬ್ಬರೂ ಸ್ವಾಮಿಯ ಹಿರಿಯ ಭಕ್ತರಾಗಿದ್ದು ಸ್ವಾಮಿಗೆ ಬೆಲೆಬಾಳುವ ಕಾಣಿಕೆಗಳನ್ನು ನೀಡಿದರು. ಕೃಷ್ಣದೇವರಾಯನು ಕ್ರಿ.ಶ. 1513 ರ ಫೆಬ್ರವರಿ 10 ರಂದು ತಿರುಮಲೆಗೆ ಬಂದು ಸ್ವಾಮಿಯನ್ನು ಪೂಜಿಸಿ ಬಹುಮೂಲ್ಯ ಆಭರಣಗಳನ್ನು ಸಮರ್ಪಿಸಿದನು. ಈ ಆಭರಣಗಳಲ್ಲಿ ಮುತ್ತು ರತ್ನಗಳಿಂದ ಕೂಡಿದ ಬಂಗಾರದ ಕಿರೀಟದೊಡನೆ ಒಂದು ಬಂಗಾರದ ಮೂರೆಳೆ ಸರವೂ ಇದ್ದಿತು. ಒಂದು ಮುತ್ತಿನ ಹಾರವನ್ನೂ, ಒಂದು ಬೆಳ್ಳಿಯ ತಟ್ಟೆಯನ್ನೂ ಆತನು ದೇವರಿಗೆ ಸಮರ್ಪಿಸಿದನು (III-32-39). ಇದೇ ಸಮಯದಲ್ಲಿ ಆತನೊಡನೆ ಬಂದಿದ್ದ ಆತನ ಪತ್ನಿಯರಿಬ್ಬರಲ್ಲಿ ಚಿನ್ನಾಜಿ ಅಮ್ಮನು 374 ಕಳಂಜುಗಳ ತೂಕದ ಚಿನ್ನದ ಬಟ್ಟಲನ್ನು ಸ್ವಾಮಿಯ ನಿವೇದನೆಯ ಹಾಲಿನ ಸಮರ್ಪಣೆಯಲ್ಲಿ ಬಳಸಲು ನೀಡಿದರೆ ಇನ್ನೊಬ್ಬರಾಣಿ ತಿರುಮಲ ದೇವಿಯು ಇದೇ ತೂಕದ ಒಂದು ಹಾಲಿನ ಬಟ್ಟಲನ್ನು ಒಂದು ಬಂಗಾರದ ತಟ್ಟೆಯನ್ನು ಸಮರ್ಪಿಸಿದಳು (III-50-59). ಇದೇ ಕಾಲದ ಇನ್ನೊಂದು ಶಾಸನವು

ಆತನ ಇತರೆ ಸಮರ್ಪಣೆಗಳಾದ ಅಮೂಲ್ಯ ಹರಳುಗಳ ವೈಢೂರ್ಯ ಹಾರ, ಬಂಗಾರದ ಭುಜಕೀರ್ತಿಗಳನ್ನು ಸ್ವಾಮಿಯ ಉತ್ಸವ ಮೂರ್ತಿಗೆ ಅರ್ಪಿಸಿದ ವಿಷಯವನ್ನು ತಿಳಿಸುತ್ತದೆ.(III-60-61). ಆತನು ತನ್ನ ತಂದೆತಾಯಿಗಳ ಧರ್ಮಕ್ಕೆಂದು ಮತ್ತಷ್ಟು ಆಭರಣಗಳನ್ನೂ ಒಂದು ಹಳ್ಳಿಯನ್ನೂ ದಾನಮಾಡಿದನು (III-65). ಚಕ್ರವರ್ತಿಯು ಎರಡನೇ ಬಾರಿ ತಿರುಮಲೆಗೆ ಬಂದಿದ್ದು ಕ್ರಿ.ಶ. 1514 ರ ಜುಲೈ ಆರರಂದು. ಈ ಬಾರಿ 30,000 ಚಕ್ರಪೊನ್‌ಗಳನ್ನು ನೀಡಿ ಸ್ವಾಮಿಗೆ ಕನಕಾಭಿಷೇಕ ಮಾಡಿಸಿದನು. ಒಂದು ಅಮೂಲ್ಯ ಹರಳುಗಳ ಮೂರೆಳೆ ಸರವನ್ನು ಸ್ವಾಮಿಗೆ ಸಮರ್ಪಿಸಿ, ಒಂದು ಹಳ್ಳಿಯನ್ನೂ ನೀಡಿದನು (III-70-72). ಇದೇ ಸಮಯದಲ್ಲಿ ಆತನ ರಾಣಿ ಚಿನ್ನಾಜಿ ದೇವಿಯು ಅಮೂಲ್ಯವಾದ ಹರಳುಗಳನ್ನು ಹುದುಗಿಸಿದ ಒಂದು ಸರವನ್ನೂ, ಒಂದು ಗ್ರಾಮವನ್ನೂ ಸಮರ್ಪಿಸಿದ್ದಾಳೆ (III-73-79). ತಿರುಮಲದೇವಿಯು ವಜ್ರ, ಕೆಂಪು, ಹವಳ ಮುತ್ತುಗಳ ಒಂದು ಬಂಗಾರದ ಪದಕವನ್ನು ಸಮರ್ಪಿಸುತ್ತ ಒಂದು ಗ್ರಾಮದಾನ ಮಾಡಿದಳು. ಕ್ರಿ.ಶ. 1515 - ಅಕ್ಟೋಬರ್ 25 ರಂದು ಪುನಃ ತಿರುಮಲೆಗೆ ಬಂದ ಕೃಷ್ಣರಾಯನು ಸ್ವಾಮಿಗೆ ನವರತ್ನಗಳ ಒಂದು ಪ್ರಭಾವಳಿಯನ್ನು ಸಮರ್ಪಿಸಿದನು (III-76-79). ಆತನು ಕ್ರಿ.ಶ. 1517 ರ ಜನವರಿ 2 ರಂದು ತಿರುಮಲೆಗೆ ಬಂದನು. ಈ ಬಾರಿ ಆತನು ಸ್ವಾಮಿಗೆ ಒಂದು ಕಂಠ ಹಾರವನ್ನೂ ಒಂದು ಪದಕವನ್ನೂ ಸಮರ್ಪಿಸಿ 3,07,000 ವರಹದ ಚಿನ್ನದಿಂದ ಸ್ವಾಮಿಯ ವಿಮಾನದ ಮುಲಾಮು ಮಾಡಿಸಿದನು. ಪ್ರತಿ ಗುರುವಾರ ಸ್ವಾಮಿಗೆ ಮಾಡುವ ಪುಳಿಕಾಪ್ಪು ಸೇವೆಗೆಂದು ಒಂದು ಸಾವಿರ ವರಹಗಳನ್ನು ನೀಡಿದನು (III-80-82). ಕ್ರಿ.ಶ. 1521 ರ ಫೆಬ್ರವರಿ 17 ರಂದು ತಿರುಮಲೆಯಲ್ಲಿ ಇದ್ದ ಆತನು ಈ ಬಾರಿ ಸ್ವಾಮಿಗೆ ರತ್ನಗಳನ್ನು ಜೋಡಿಸಿದ ರೇಷ್ಮೆ ವಸ್ತ್ರವನ್ನು, ಬೆಲೆಬಾಳುವ ಹರಳುಗಳನ್ನು ಹೊಂದಿಸಿದ ಒಂದು ಕುಲಾವಿಯನ್ನು, ಎರಡು ಚಾಮರಗಳನ್ನು ಸಮರ್ಪಿಸಿದನು. ಇವುಗಳೊಂದಿಗೇ ಆತನು ಸ್ವಾಮಿಗೆ 10,000 ವರಹಗಳನ್ನು ಸಮರ್ಪಿಸಿದನು (III-83). ಆತನ ರಾಣಿ ತಿರುಮಲದೇವಿಯು ದೇವರಿಗೆ ಒಂದು ಬಹು ಬೆಲೆಯ ಪದಕವನ್ನು ಅರ್ಪಿಸಿದಳು (III-80). ವಿಮಾನಕ್ಕೆ ಚಿನ್ನದ ಮುಲಾಮು ಹಚ್ಚುವ ಕೆಲಸವು 1518 ರ ಸೆಪ್ಟೆಂಬರ್ 9 ರಂದು ಮುಗಿಯಿತು (III-81). ಕ್ರಿ.ಶ. 1515 ರ ಒಂದು ದಾಖಲೆಯು ಗೌರಕ್ಕುಲಿ ವಸಂತ ಉತ್ಸವವನ್ನು ಕುರಿತು ಹೇಳುವುದು (III-105). ನಂತರದ ವರ್ಷದ ಒಂದು ಶಾಸನವು ಪುರಟ್ಟಾಸಿ, ತೈ, ಪಂಗುಣಿ ಮಾಸಗಳಲ್ಲಿ ನಡೆಯುತ್ತಿದ್ದ ಬ್ರಹ್ಮೋತ್ಸವಗಳನ್ನು ಕುರಿತು ಹೇಳುತ್ತದೆ (III-113). ನಂತರದ ವರ್ಷದ ಒಂದು ಶಾಸನವು ಗೌರಕ್ಕುಲಿ ವಸಂತದ ಉತ್ಸವವನ್ನು ತೆಪ್ಪೋತ್ಸವದ ನಂತರದ ದಿನ ನಡೆಸಲಾಗುತ್ತಿದ್ದಿತು ಎಂದು ತಿಳಿಸುತ್ತದೆ (III-127). ಕ್ರಿ.ಶ. 1519 ರ ಒಂದು ಶಾಸನವು ವರ್ಷದಲ್ಲಿ ನಡೆಯುತ್ತಿದ್ದ ಎಂಟು ಬ್ರಹ್ಮೋತ್ಸವದಲ್ಲಿ ಒಟ್ಟು ನಲವತ್ತು ದಿನಗಳ ಕಾಲ ಸ್ವಾಮಿಯ ಉತ್ಸವ ಮೂರ್ತಿಯು ವರಾಹಸ್ವಾಮಿ ಆಲಯದಲ್ಲಿ ಆಸೀನ ಗೊಳ್ಳುತ್ತಿತ್ತು - ಎಂದು ತಿಳಿಸುತ್ತದೆ (III-132). ಬ್ರಹ್ಮೋತ್ಸವದ ದಿನಗಳಲ್ಲಿ ಸ್ವಾಮಿಯು ದಿನವೂ ಸಂಜೆಗಳಲ್ಲಿ ಶ್ರೀ ಸೂಕ್ತವನ್ನು ಕೇಳುತ್ತ ನಿಧಾನವಾಗಿ ನಡೆದು ಬರುತ್ತಿದ್ದನೆಂದೂ ಹೇಳಲಾಗಿದೆ (III-133).

ಅಚ್ಯುತರಾಯನ ಕಾಲಕ್ಕೆ ಸೇರಿದ ಕ್ರಿ.ಶ. 1530 ರ ಒಂದು ಶಾಸನವು ಅಂದಿನ ದಿನಗಳಲ್ಲಿ ಆಲಯದಲ್ಲಿ ನಡೆಯುತ್ತಿದ್ದ ಉತ್ಸವಗಳ ಪಟ್ಟಿಯನ್ನು ನೀಡುತ್ತದೆ. ಅದರಂತೆ ವರ್ಷದಲ್ಲಿ ಎಂಟು ಬ್ರಹ್ಮೋತ್ಸವಗಳೇ ಅಲ್ಲದೆ ಗರುಡವಾಹನ, ರಥೋತ್ಸವ, ಅಚ್ಯುತರಾಯ ಬ್ರಹ್ಮೋತ್ಸವ, ಸಂಕೀರ್ತನ ಭಂಡಾರಕ್ಕೆ ಮೆರವಣಿಗೆ ಉತ್ಸವ, ಬೇಸಿಗೆ ಉತ್ಸವ, ಅಧ್ಯಯನೋತ್ಸವ, ಉಯ್ಯಾಲೋತ್ಸವ, ಪವಿತ್ರೋತ್ಸವ, ಸಹಸ್ರಕಳಶಾಭಿಷೇಕ, ವಸಂತೋತ್ಸವ, ಹುಣ್ಣಿಮೆ, ಅಮಾವಾಸ್ಯೆ, ದಶಮಿ, ಏಕಾದಶಿ, ದ್ವಾದಶಿ, ಯುಗಾದಿ, ಶ್ರೀ ಜಯಂತಿ, ಉರಿ - ಆಡಿ, ಕಾರ್ತೀಕ್ಕೈ ಪಾರ್ವೇಟಿ ಉತ್ಸವ, ಕನೂ ಉತ್ಸವ, ಉತ್ಥಾನ ಏಕಾದಶಿ, ಹಾಗೂ ಮುಕ್ಕೋಟಿ ದ್ವಾದಶಿಗಳು ನಡೆಯುತ್ತಿದ್ದವು (IV-6). 1632 ದಾಖಲೆಯು ಅಳಗಪ್ಪಿರನಾರ್ ತಿರುಮಂಜನವಾದ ಮೇಲೆ ಸ್ವಾಮಿಗೆ ಮೂರು ಯಜ್ಞೋಪವೀತಗಳನ್ನು ಸಮರ್ಪಿಸಲಾಗುತ್ತಿದ್ದಿತೆಂದು ಹೇಳುತ್ತದೆ.

ಕ್ರಿ.ಶ. 1533 ರ ಜನವರಿ 30 ರಂದು ಅಚ್ಯುತರಾಯನು ತಿರುಮಲೆಗೆ ಆಗಮಿಸಿ ಶ್ರೀನಿವಾಸ ಸಹಸ್ರ ನಾಮಾರ್ಚನೆಯನ್ನು ಅರ್ಚಕರು ಹೇಳುತ್ತಿರಲು ಸ್ವಾಮಿಗೆ ತಾನೇ ಅರ್ಚನೆಯನ್ನು ಮಾಡಿದನು. ಈ ಸಮಯದಲ್ಲಿ ಸ್ವಾಮಿಗೆ ಅಮೂಲ್ಯವಾದ ಆಭರಣಗಳನ್ನೂ ವಸ್ತ್ರಗಳನ್ನೂ ಸಮರ್ಪಿಸಿದನು (IV-16&17). ಕ್ರಿ.ಶ. 1532 ರ ಒಂದು ಶಾಸನವು ಬೆಟ್ಟದ ಮೇಲಿನ ಪುಷ್ಕರಿಣಿಯಲ್ಲಿ ಕಲ್ಲು ಹಾಸಿನ ಮೆಟ್ಟಿಲುಗಳನ್ನು ನಿರ್ಮಿಸಿ ಒಂದು ಮಂಟಪವನ್ನೂ ಆವರಣ ಗೋಡೆಯನ್ನೂ ನಿರ್ಮಿಸಿದಂತೆ ಹೇಳುತ್ತದೆ (IV-20). ಮಾರನೆಯ ವರ್ಷದ ಶಾಸನವೊಂದು ಅಚ್ಯುತರಾಯ ಕೋನೇರಿಯನ್ನು ಹೆಸರಿಸಿರುವುದು (IV-24). ಕ್ರಿ.ಶ. 1534 ರ ಒಂದು ಶಾಸನವು ನಿವೇದನೆಗಳನ್ನು ಸಮರ್ಪಿಸುವ ಸಂಧಿಗಳನ್ನು - ಅವಸರಗಳನ್ನು - ಕೃಷ್ಣದೇವರಾಯ, ಅಚ್ಯುತರಾಯ, ಅಚ್ಯುತರಾಯನ ಪತ್ನಿ ವರದಾಜಿ ಅಮ್ಮನವರ ಹೆಸರುಗಳಲ್ಲಿ ಗುರುತಿಸುವುದು (IV-29). ತಾಳ್ಳಪಾಕ ತಿರುಮಲ ಅಯ್ಯಂಗಾರ್ಯನು ಅನ್ನಮಾಚಾರ್ಯನ ಮಗ. ಈತನು ಸ್ವಾಮಿ ಪುಷ್ಕರಿಣಿಯ ಕಲ್ಲುಹಾಸಿನ ತೊಟ್ಟಿಲುಗಳ್ನು ಕಟ್ಟಿಸಿ, ಪುಷ್ಕರಿಣಿಯ ಒಳಗೆ ಒಂದು ನೀರಾಳಿ ಮಂಟಪವನ್ನು ನಿರ್ಮಿಸಿ, ಇದರ ನಾಲ್ಕು ಕಡೆಯೂ ಪ್ರದಕ್ಷಿಣ ಮಂಟಪಗಳನ್ನು ಕಟ್ಟಿಸಿ, ವರಾಹಸ್ವಾಮಿ ಆಲಯದ ಪ್ರಾಕಾರದ ಗೋಡೆಗಳನ್ನು ನಿರ್ಮಿಸಿ, ... ವೆಂಕಟೇಶ್ವರಸ್ವಾಮಿಯ ಆಲಯದ ಪೂ... ವ



ಗೋಪುರವನ್ನು ಎಬ್ಬಿಸಿದನು (IV-40-41). ಕ್ರಿ.ಶ. 1535 ರ ಒಂದು ಶಾಸನವು ಬ್ರಹ್ಮೋತ್ಸವದ ದಿನಗಳಲ್ಲಿ ನಡೆಯುತ್ತಿದ್ದ ತಿರುಕಲ್ಯಾಣವನ್ನು ಉಲ್ಲೇಖಿಸಿ ಕಾರ್ತೀಕ ಮಾಸದಲ್ಲಿ ಕೈಶಿಕ ಪುರಾಣವನ್ನು ಓದುತ್ತಿದ್ದರೆಂದು ಹೇಳುತ್ತದೆ. ತಿರುಮಾಮಣಿ ಮಂಟಪದ ಉಯ್ಯಾಲೆಯಲ್ಲಿ ಬಾಲಕೃಷ್ಣನನ್ನು ತೂಗುತ್ತಿದ್ದರೆಂದು ಈ ಶಾಸನ ವಿವರಿಸುವುದು (IV-46). ಅದೇ ವರ್ಷದಲ್ಲಿ ಅಚ್ಯುತರಾಯನು ತಿರುಮಲೆಯ ದೇವರು ಹಾಗೂ ಆತನ ಪತ್ನಿಗೆಂದು ಐದು ದಿನಗಳ ಪರಿಯಂತ ಮಾಡುವಂತಹ ಲಕ್ಷ್ಮೀದೇವಿ ಮಹೋತ್ಸವವನ್ನು ಆರಂಭಿಸಿದನು. ಮತ್ತು ಈ ಉತ್ಸವದ ವೆಚ್ಚಕ್ಕೆ 300 ಪೊನ್‌ಗಳ ಉತ್ತರಾಯವನ್ನೂ ಆಲಯಕ್ಕೆ ನೀಡಿದನು (IV-50). ಕ್ರಿ.ಶ. 1536 ರ ಒಂದು ಶಾಸನವು ವಣ್ಣಿಮಾರಂ ಅಥವಾ ವಿಜಯದಶಮಿಯ ಉತ್ಸವವನ್ನು ಕುರಿತು ಹೇಳುವುದು (IV-69). ಈ ಕಾಲದ ಕೆಲವು ಶಾಸನಗಳು ಆಲಯದಲ್ಲಿ ನಡೆಯುತ್ತಿದ್ದ ಉತ್ಸವಗಳ ಪಟ್ಟಿಯನ್ನು ನೀಡುತ್ತವೆ (IV-81-86-110-158). ಕ್ರಿ.ಶ.1540 ರಲ್ಲಿ ಅಚ್ಯುತರಾಯನು ಹನುಮಾಸಾನಿ ಎಂಬ ನರ್ತಕಿಯನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಗೆಂದು ಕಳುಹಿಸಿದನು (IV-142). ಕ್ರಿ.ಶ. 1541 ರ ಒಂದು ಶಾಸನವು ಆಲಯದ ಮೊದಲನೆಯ ಪ್ರಾಕಾರದ ಮಂಟಪದಲ್ಲಿ - ಸಂಕೀರ್ತನ ಭಂಡಾರದಲ್ಲಿಟ್ಟ ತಾಳ್ಳಪಾಕ ಕವಿಗಳ ಸಂಕೀರ್ತನೆಗಳ ತಾಮ್ರಪತ್ರಗಳ ಬಗ್ಗೆ ಹೇಳುತ್ತವೆ (IV-155). ಇದೇ ಕಾಲದ ಮತ್ತೊಂದು ಶಾಸನವು ತಿರುಮಲೆಯ ನರಸನಾಯಕ ವೀಧಿಯ ಬಗ್ಗೆ ತಿಳಿಸುತ್ತದೆ (IV-159). ತಿರುಮಲೆಯ ಪಶ್ಚಿಮ ರಥ ಬೀದಿಯ ತಿರುಮಲಯ್ಯಂಗಾರ್ಯನ ಮನೆಯ ಪೂರ್ವಕ್ಕೆ ವರದರಾಜಿ ಅಮ್ಮ ತಿರುವೀಧಿಯನ್ನು ಸಲಕರಾಜು ಸಿರುತಿರುಮಲ ರಾಜನು ಕಟ್ಟಿಸಿದನೆಂದು 1541 ರ ಒಂದು ಶಾಸನ ತಿಳಿಸುತ್ತದೆ (IV-168).

ಕ್ರಿ.ಶ. 1543 ಒಂದು ಶಾಸನವು ಶ್ರೀ ವೆಂಕಟೇಶ್ವರಸ್ವಾಮಿಯ ಎದೆಯ ಮೇಲೆ ಅಲರ್ ಮೇಲ್ ಮಂಗೈ ನಾಚ್ಚಿಯಾರ್ ಇರುವಳು ಎಂದು ಹೇಳುತ್ತದೆ (V-5). ಮತ್ತೊಂದು ಶಾಸನವು ಸ್ವಾಮಿಯ ಹಣೆಯ ತಿರುನಾಮಕ್ಕೆ ಶುದ್ಧಕರ್ಪೂರವನ್ನು, ಕಸ್ತೂರಿಯನ್ನೂ ಬಳಸಲಾಗುತ್ತಿತ್ತು ಎಂದು ಹೇಳುತ್ತದೆ (V-2-8). ಮೂರನೆಯ ದಾಖಲೆಯು ತಿರುಮಲೆಯ ಆಲಯದಲ್ಲಿ ದಿನವೂ ಶ್ರೀನಿವಾಸ ಪುರಾಣದ ಪಠಣವಾಗುತ್ತಿದ್ದಿತು ಎಂದು ಹೇಳುವುದು (V-10). ಎರಡು ವರ್ಷದ ನಂತರದ ಒಂದು ಶಾಸನವು ಆಲಯದ ತಿರುಮಾಮಣಿ ಮಂಟಪದಲ್ಲಿ ಸ್ವಾಮಿಗೆ ಚೂರ್ಣಾಭಿಷೇಕವನ್ನು ನಡೆಸಲಾಗುತ್ತಿದ್ದಿತು ಎಂದು ಹೇಳುತ್ತದೆ (V-41). ಇದೇ ವರ್ಷದ ಇನ್ನೊಂದು ಶಾಸನವು ತಿರುಕಲ್ಯಾಣದ ದಿನವನ್ನು ಕುರಿತು ಹೇಳುವುದು. ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಒಂದು ಶಯನ ಮಂಟಪದ ಏರ್ಪಾಡು ಮಾಡಿದಂತೆಯೂ 20 ದಿನಗಳ ಗ್ರೀಷ್ಮ ಉತ್ಸವದ ಸಮಯದಲ್ಲಿ ತಾಳ್ಳಪಾಕ ಕವಿಗಳ ಸಂಕೀರ್ತನೆಗಳನ್ನು ದೇವರ ಸನ್ನಿಧಿಯಲ್ಲಿ ಹಾಡುವುದೂ, ವರ್ಷದಲ್ಲಿನ 60 ತಿರುಮಂಜನಗಳ ದಿನಗಳಲ್ಲಿ ರಾಮಾನುಜರ ಶ್ರೀ ಭಾಷ್ಯವನ್ನು ಸನ್ನಿಧಿಯಲ್ಲಿ ಪಠಿಸುವುದೂ ಇಲ್ಲಿ ಪ್ರಸ್ತಾಪವಾಗಿದೆ (V-47). ಮತ್ತೊಂದು ಶಾಸನವು ಕಾರ್ತೀಕ ಮಾಸದ ಶ್ರವಣ ನಕ್ಷತ್ರದ ದಿನದಂದು ವನಭೋಜನ ಉತ್ಸವವನ್ನು ನಡೆಸುತ್ತಿದ್ದದ್ದನ್ನು ಹೇಳುತ್ತದೆ. ಕ್ರಿ.ಶ. 1545 ರ ಒಂದು ಶಾಸನವು ಪಲ್ಲವೋತ್ಸವವನ್ನು ಕುರಿತು ಹೇಳುವುದು. ಫಂಗುಣಿ ತಿಂಗಳಿನಲ್ಲಿ 5 ದಿನಗಳ ಕಾಲದ ಸ್ವಾಮಿಯ ವೈವಾಹಿಕೋತ್ಸವವನ್ನು ಆಲಯದ ತಿರುಮಾಮಣಿ ಮಂಟಪದಲ್ಲಿ ತಾಳ್ಳಪಾಕ ಅನ್ನಮಯ್ಯನ ಮಗ ಪೆರಿಯ ತಿರುಮಲಯ್ಯಂಗಾರ್ಯನು ಆರಂಭಿಸಿದನೆಂದು ಹೇಳುತ್ತದೆ (V-71). ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಗರ್ಭಗುಡಿಯಲ್ಲಿರುವ ಕೊಲುವು ಶ್ರೀನಿವಾಸನೆಂಬ ಅಳಗಪ್ಪಿರನಾರ್ ವಿಗ್ರಹವನ್ನು ಕ್ರಿ.ಶ. 1551 ರ ಒಂದು ಶಾಸನವು ಹೇಳುತ್ತದೆ (V-129). ಕ್ರಿ.ಶ. 1561 ರ ಒಂದು ಶಾಸನವು ಆರವೀಡು ತಿರುಮಲರಾಯನು ತಿರುಮಲೆಯ ಆಲಯದ ಸಂಪಂಗಿ ಪ್ರದಕ್ಷಿಣೆಯಲ್ಲಿ ಒಂದು ಮಂಟಪವನ್ನು ಕಟ್ಟಿಸಿದನೆಂದು ಹೇಳುವುದು. ಇಲ್ಲಿ ಮೊದಲಿಗೆ ಸಾಳುವ ನರಸಿಂಹನು ಊಂಜಲ್ ಮಂಟಪವನ್ನು ಕಟ್ಟಿಸಿದ್ದನು (V-168). ಈ ಶಾಸನವು ಅಂದು ತಿರುಮಲೆಯಲ್ಲಿ ನಡೆಯುತ್ತಿದ್ದ ಉತ್ಸವಗಳ ಪಟ್ಟಿಯನ್ನು ನೀಡುತ್ತದೆ. ಅವ್ರುಗಳೆಂದರೆ - ಪವಿತ್ರೋತ್ಸವ, ಸಹಸ್ರ ನಾಮಾರ್ಚನೆ, ಸಹಸ್ರ ಕಲಶಾಭಿಷೇಕ, ಅಧ್ಯಯನೋತ್ಸವ, ವಸಂತೋತ್ಸವ ಪಲ್ಲವೋತ್ಸವ, ಫಲೋತ್ಸವ, ಮೇಷಸಂಕ್ರಮಣ, ಅಮಾವಾಸ್ಯೆ ದಿನಗಳು, ಪೂರ್ಣಿಮೆಗಳು, ದಶಮಿ, ಏಕಾದಶಿ, ದ್ವಾದಶಿ ದಿನಗಳು, ರೋಹಿಣಿ ಮೃಗಶಿರಾ, ಪುನರ್ವಸು, ಉತ್ತರಾ, ಮೂಲ, ಪೂರ್ವಾಷಾಢ, ಉತ್ತರಾಷಾಢ - ನಕ್ಷತ್ರದ ದಿನಗಳು, ಶ್ರೀ ಜಯಂತಿ ಉರ್ಲೈ ಅಭಿ, ಉತ್ಥಾನದ್ವಾದಶಿ, ದೀಪಾವಳಿ, ಯುಗಾದಿ, ಕಾರ್ತೀಕ, ಮಕರ ಸಂಕ್ರಮಣ, ಪಡಿಯವೇಟೈ, ತೈಪೂಸಂ, ತಣ್ಣೀರಮುದು (V-168). 1564 ರ ಒಂದು ಶಾಸನವು ರಥಸಪ್ತಮಿ ಉತ್ಸವವನ್ನು ಹೆಸರಿಸುತ್ತದೆ (V-173).

1586 ರ ಒಂದು ಶಾಸನ ಹೇಳುವಂತೆ, ಅವಸರದ ಚಿನ್ನಪ್ಪನು ತಿರುಮಲೆಯ ಆಲಯದ ಒಳಗಿನ ಕಲ್ಯಾಣ ಮಂಟಪವನ್ನು ನಿರ್ಮಿಸಿದನು. 1614 ರ ಒಂದು ಶಾಸನವು ತಿರುಮಲೆಯಲ್ಲಿ ಶ್ರೀರಾಮನವಮಿಯ ಮಾರನೆಯ ದಿನ ನಡೆಯುತ್ತಿದ್ದ ರಾಮಪಟ್ಟಾಭಿಷೇಕ ಉತ್ಸವವನ್ನು ಕುರಿತು ಹೇಳುತ್ತ ಅಂದು ವಾಯುಪುರಾಣವನ್ನು ಓದುತ್ತಿದ್ದರು ಎನ್ನುತ್ತದೆ (VI-18). 1623 ರ ಎರಡು ಶಾಸನಗಳು ಮಟ್ಲ ಅನಂತರಾಜನು ಹಲವು ವಾಹನಗಳನ್ನು ಸ್ವರ್ಣಾಸನ, ಗಜವಾಹನ, ಸಮರಭೂಪಾಲವಾಹನ, ಪದ್ಮಪೀಠ, ಉನ್ನತುಕ್ಕೇಳಿ ಮಂಟಪ - ಇತ್ಯಾದಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸಮರ್ಪಿಸಿದನು - ಎಂದು ಹೇಳುತ್ತದೆ. ಆತನು ಮೆಟ್ಟಿಲದಾರಿಯಲ್ಲಿ ಮೆಟ್ಟಿಲುಗಳನ್ನು ಹಾಕಿಸಿ, ಅಲ್ಲಿನ ಗಾಳಿಗೋಪುರವನ್ನು - ಅಗ್ರಗೋಪುರವನ್ನು ನಿರ್ಮಿಸಿದನು (VI-25-26). ಅಲಿಪಿರಿಯ ಬಳಿಯ ಎರಡನೆಯ ಗೋಪುರವನ್ನು ಈತನೇ ನಿರ್ಮಿಸಿದನು. (VI-27). ಈ ಗೋಪುರದ ಗೋಡೆಯ ಕಲ್ಲಿನಲ್ಲಿ ಈತನ ತಂದೆ ತಾಯಿಗಳ, ಸ್ವಾಮಿಯ ವಿಗ್ರಹಗಳಿವೆ.

(ಮುಂದುವರೆಯುವುದು.)



ರಂಗನನು ನೋಡುವುದೆ ಕಂಗಳಿಗೆ ಭೂಷಣ.

# ತಿರುಮಲೆ ತಿರುಪತಿ ದೇವಸ್ಥಾನಗಳು
# ಖಜಾನೆ ವಿಭಾಗ

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯದೇ ಒಂದು ಪ್ರತ್ಯೇಕವಾದ ಸಂಸ್ಥಾನ. ಅದರಲ್ಲಿ ಹಲವು ಹನ್ನೊಂದು ವಿಭಾಗಗಳು. ಎಲ್ಲ ವಿಭಾಗಗಳೂ, ಇಲಾಖೆಗಳೂ, ಆ ದೇವದೇವನಿಗೆ, ಅವನನ್ನು ದರ್ಶಿಸಲು ಬರುವ ಯಾತ್ರಿಕರಿಗೆ ಎಲ್ಲ ರೀತಿಯ ಸೇವೆ ಸಲ್ಲಿಸಲು ಅಂಕಿತವಾಗಿವೆ.

ಆದಿಲಕ್ಷ್ಮಿಯನ್ನು - ಸಂಪದಧಿದೇವತೆಯನ್ನು ಎದೆಯಲ್ಲಿ ನಿಲ್ಲಿಸಿಕೊಂಡ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಖಜಾನೆ ತಿರುಪತಿಯಲ್ಲಿದೆ. ತಿರುಪತಿಯಲ್ಲಿರುವ ತಿ.ತಿ.ದೇ. ಪರಿಪಾಲನಾಭವನದಲ್ಲಿನ ಎಡಭಾಗದಲ್ಲಿ ಅತ್ಯಂತ ಕಟ್ಟೆಚ್ಚರಿಕೆಯ ಭದ್ರತೆಯ ಏರ್ಪಾಡುಗಳ ನಡುವೆ ಖಜಾನೆ ವಿಭಾಗವು ಕಂಡುಬರುತ್ತದೆ. ಒಳಕ್ಕೆ ಕೇವಲ ಪೂರ್ವ ಅನುಮತಿಯಿರುವ ಅಧಿಕಾರಿಗಳಿಗೆ ಸಿಬ್ಬಂದಿಗೆ ಮಾತ್ರವೇ ಪ್ರವೇಶ.

ಸ್ಟ್ರಾಂಗ್ ರೂಂ ಭದ್ರತಾ ಲಾಕರ್‌ಗಳು ಇರುವಂತಹ ಈ ಖಜಾನೆಯಲ್ಲಿ ಸ್ವಾಮಿಗೆ ಸಂಬಂಧಿಸಿದ ಅತ್ಯಂತ ಬೆಲೆಬಾಳುವ ವಜ್ರಗಳು, ಬಂಗಾರ, ಆಭರಣಗಳು ಅಲಂಕಾರಗಳು ಇರುತ್ತವೆ. ಇಪ್ಪತ್ನಾಲ್ಕು ಗಂಟೆಯ ಸುರಕ್ಷಣೆಯ ಆವರಣದಲ್ಲಿ ಈ ಖಜಾನೆಯಿದೆ. ಅತ್ಯವಸರ ಸಮಯದ ಅಲಾರಂಸಿಸ್ಟಂ ಸಹ ಏರ್ಪಾಡಾಗಿದೆ. ಒಬ್ಬ ಡೆಪ್ಯೂಟಿ ಎಕ್ಸಿಕ್ಯುಟಿವ್ ಆಫೀಸರ್ ಪರ್ಯವೇಕ್ಷಣೆಯಲ್ಲಿ ಈ ವಿಭಾಗವಿದೆ.

ತಿರುಮಲೆಯ ಸ್ವಾಮಿ ಆಲಯವೇ ಅಲ್ಲದೆ ಮತ್ತಿತರ ಆಲಯಗಳ ಹುಂಡಿ ಮೂಲಕ ಬರುವಂತಹ ಬಂಗಾರ, ಬೆಳ್ಳಿ, ಮತ್ತಿತರ ಬೆಲೆಬಾಳುವ ವಸ್ತುಗಳನ್ನು ದಿನವೂ ಈ ಖಜಾನೆಗೆ ಸೇರಿಸುತ್ತಾರೆ. ಇವುಗಳನ್ನು ಲೆಕ್ಕ ಹಿಡಿದು ಆಗಿಂದಾಗ್ಗೆ ತತ್‌ಕ್ಷಣವೇ ಉಗ್ರಾಣದ - ಭಂಡಾರದ - ನೊಂದಣಿ ಪಟ್ಟಿಯಲ್ಲಿ ನಮೂದು ಮಾಡುತ್ತಾರೆ. ಇವುಗಳ ತನಿಖೆ ಅತ್ಯಂತ ಶಿಸ್ತಿನಿಂದ ಕೂಡಿರುತ್ತದೆ.

ಬಂಗಾರವನ್ನು ವಿದೇಶೀ ಚಿನ್ನ, ಸ್ವದೇಶೀ ಚಿನ್ನ, ಚಿನ್ನದ ಆಭರಣ, ಚಿನ್ನದ ವಸ್ತುಗಳು, ಚಿನ್ನದ ಮುಲಾಮ ಮಾಡಿದ ತಾಮ್ರದ ವಸ್ತುಗಳು, ವಜ್ರಗಳು, ವಜ್ರಗಳು ಹುದುಗಿಸಿದ ಚಿನ್ನದ ಆಭರಣಗಳು - ತದಿತರಗಳೆಂದು ವಿಭಾಗೀಕರಣ ಮಾಡುವರು. ಪ್ರತಿತಿಂಗಳೂ, ಇವುಗಳನ್ನು ಮತ್ತೊಮ್ಮೆ ಲೆಕ್ಕಹಿಡಿದು ರಿಜಿಸ್ಟರುಗಳಲ್ಲಿ ನಮೂದು ಮಾಡುವುದು, ಹಳೆಯ ನಮೂದುಗಳನ್ನು ಸರಿಯಾಗಿವೆಯೋ ಎಂದು ಪುನಃಪರಿಶೀಲಿಸುವುದು ನಡೆಯುತ್ತದೆ.

ತಿರುಮಲೆಯ ಸ್ವಾಮಿಯನ್ನು ದರ್ಶಿಸಲು ದೇಶವಿದೇಶಗಳಿಂದ ಬರುವ ಮಂದಿ ತಮ್ಮ ತಮ್ಮ ಕೋರಿಕೆಗಳ ಹರಕೆಗಳ ಪ್ರಕಾರ ಕಾಣಿಕೆಗಳನ್ನು ಸಮರ್ಪಿಸುತ್ತಿರುತ್ತಾರೆ. ಅದರಲ್ಲಿ ವಿದೇಶೀ ನಾಣ್ಯ ನಗಗಳು, ಗಡಿಯಾರಗಳು, ವಸ್ತ್ರಗಳು ಬೆಳ್ಳಿಯ ವಸ್ತುಗಳು, ಬೆಳ್ಳಿಯ ಕೈಕಾಲು, ತಲೆ ಮೊದಲಾದ ಅವಯವಗಳು, ಹಿತ್ತಾಳೆ ಪಾತ್ರೆ, ಪಡಗಗಳು ಮತ್ತಿತರ ವಸ್ತುಗಳೆಷ್ಟೋ ಇರುವುದುಂಟು. ಇವೆಲ್ಲವನ್ನೂ ಪರಕಾಮಣಿಯಲ್ಲಿ (ಆಲಯದಲ್ಲಿ ದಿನವೂ ಭಕ್ತರ ಸಾರ್ವಜನಿಕ ಸಾಕ್ಷಿಯಲ್ಲಿ ನಡೆಯುವ ಹುಂಡಿಯ ಎಣಿಕೆ ಕಾರ್ಯ) ಲೆಕ್ಕ ಕಟ್ಟಲಾಗುತ್ತದೆ. ಅಲ್ಲಿ ಎಲ್ಲವೂ ರಿಕಾರ್ಡ್ ಆದ ನಂತರ ಭದ್ರವಾದ ಕಾವಲಿನಲ್ಲಿ ತಿರುಪತಿಗೆ ತೆಗೆದುಕೊಂಡು ಬಂದು ಖಜಾನೆಯನ್ನು ಸೇರಿಸಲಾಗುತ್ತದೆ.

ಗಡಿಯಾರಗಳು, ಬೆಳ್ಳಿವಸ್ತುಗಳು, ವಸ್ತ್ರಗಳು, ಸಿ.ಡಿ.ಗಳು, ಹಿತ್ತಾಳೆ, ತಾಮ್ರ ವಸ್ತುಗಳು - ಮೊದಲಾದುವನ್ನು ಹರಾಜಿನಲ್ಲಿ ಮಾರಾಟ ಮಾಡಲಾಗುತ್ತದೆ. ಈ ಹರಾಜಿನ ದಿನವನ್ನು ಎಲ್ಲರಿಗೂ ತಿಳಿಯುವಂತೆ ಮೊದಲೇ ದಿನಪತ್ರಿಕೆಗಳಲ್ಲಿ ಪ್ರಕಟಿಸುತ್ತಾರೆ. ತಕ್ಕ ಹಣವನ್ನು ಠೇವಣಿಯನ್ನಾಗಿಟ್ಟು ಯಾರು ಬೇಕಾದರೂ ಈ ಹರಾಜಿನಲ್ಲಿ ಪಾಲ್ಗೊಳ್ಳಬಹುದು. ಹರಾಜಿನಲ್ಲಿ ವಸ್ತುಗಳನ್ನು ಕೊಳ್ಳುವವರಿಗೆ ಯಾವುದೋ ವಸ್ತುಗಳನ್ನು ಕೊಳ್ಳುವಂತಹ ಭಾವನೆಯಲ್ಲದೆ ಸ್ವಾಮಿಯ ಪ್ರಸಾದವನು ಪಡೆಯುತ್ತಿರುವೆವೆಂಬ


ಹರಾಜಿನಲ್ಲಿ ಭಾಗವಹಿಸಿರುವ ಸಾರ್ವಜನಿಕರು.



ಬಂಗಾರ, ಬಂಗಾರದ ಆಭರಣಗಳ ಸಂಗ್ರಹ 250 ರಿಂದ 300 ಕಿಲೋಗ್ರಾಂ ತೂಕವನ್ನು ಮೀರಿದರೆ ಅದನ್ನು ಲೆಕ್ಕ ಕಟ್ಟಿ ಸರ್ಕಾರದ ಟಂಕಸಾಲೆಗೆ ಕಳುಹಿಸುತ್ತಾರೆ. ಅಲ್ಲಿ ಬಂಗಾರವನ್ನು ಕರಗಿಸಿ ತಿರುಮಲ-ತಿರುಪತಿ ದೇವಸ್ಥಾನದ ಅಗತ್ಯಕ್ಕೆ ತಕ್ಕಂತೆ ನಾಲ್ಕು, ಐದು, ಎಂಟು, ಹತ್ತು ಗ್ರಾಂ ತೂಕದ ಸ್ವಾಮಿ ಮತ್ತು ಅಮ್ಮನವರ ಚಿತ್ರಗಳನ್ನು ಹೊಂದಿದ ಪದಕಗಳನ್ನು ಮಾಡಿಸಿ ಮತ್ತೆ ಪಡೆಯಲಾಗುವುದು. ಇದನ್ನು ಭಕ್ತರು ಕೊಂಡುಕೊಳ್ಳಲು ಅವಕಾಶವಿದೆ. ಈ ಪದಕಗಳು ತಿರುಮಲೆಯ ಆಲಯದ ಒಳಗಡೆಯು, ತಿರುಚಾನೂರು ಆಲಯದ ಒಳಗಡೆಯೂ ದೊರೆಯುತ್ತವೆ.

ಭಾವನೆಯೇ ಇರುವುದು.

ಹುಂಡಿಯ ಮೂಲಕ ಬರುವ ವಿದೇಶೀ ನಾಣ್ಯಗಳನ್ನು ಮಾರಾಟ ಮಾಡಲು ತಕ್ಕ ಪ್ರಯತ್ನಗಳು ನಡೆಯುತ್ತಿವೆ.

ಹುಂಡಿಯ ಮೂಲಕ ದೊರೆಯುವ ರೇಷ್ಮೆ ವಸ್ತ್ರಗಳನ್ನು ವಿವಿಧ ಆಲಯಗಳ ವಿವಿಧ ಅಗತ್ಯಗಳಿಗೆ ಒದಗಿಬರುವಂತೆ ಇರುವಂತಹ ವನ್ನು ಬಳಸಲಾಗುತ್ತದೆ. ಅಲ್ಲಲ್ಲಿನ ಸೇವೆಗಳಿಗೆ, ಆಯಾ ಹಬ್ಬಹರಿದಿನಗಳಲ್ಲಿ ಇವುಗಳನ್ನು ಬಳಸಲಾಗುವುದು.

ಹಿತ್ತಾಳೆ ತಾಮ್ರದ ಪಾತ್ರೆಗಳನ್ನು ತಿ.ತಿ.ದೇ. ಕ್ಯಾಂಟೀನ್‌ಗಳು, ಅನ್ನದಾನಂ ಭವನ ಮೊದಲಾದ ಕಡೆ ಬಳಸುವ ಅವಕಾಶವಿದೆ. ಹುಂಡಿಯಲ್ಲಿ ಬರುವಂತಹ ಯಾವುದೇ ಕಾಣಿಕೆಯನ್ನು ವ್ಯರ್ಥವಾಗದಂತೆ ನೋಡಿ ಕೊಳ್ಳಲಾಗುವುದು.

## ಬಹಿರಂಗ ಹರಾಜು ವಿವರ

ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಹಾಗೂ ಇತರ ಆಲಯಗಳ ಹುಂಡಿಯ ಮೂಲಕ ಭಕ್ತರು ಸಮರ್ಪಿಸುವ ವಿವಿಧ ರೀತಿಯ ವಸ್ತುಗಳನ್ನು ಎಂದರೆ ಹೊಸ ಮತ್ತು ಹಳೆಯ ಬೆಳ್ಳಿಯ ವಸ್ತುಗಳು, ಹಿತ್ತಾಳೆ, ತಾಮ್ರ, ಕಂಚು, ವಸ್ತುಗಳು, ಸ್ಟೀಲ್ ವಸ್ತುಗಳು ವಿವಿಧ ರೀತಿಯ ಗಡಿಯಾರಗಳು, ಸಿ.ಡಿ. ಕ್ಯಾಸೆಟ್‌ಗಳು ಆಡಿಯೋ ವೀಡಿಯೋ ಕ್ಯಾಸೆಟ್‌ಗಳು, ಹಳೆಯ ಹೊಸ ವಸ್ತುಗಳು ಸೀರೆ, ಧೋತಿ, ಉತ್ತರೀಯ, ಕುಪ್ಪಸದ ಕಣ - ಮೊದಲಾದವನ್ನು ಪ್ರತಿ ಮೂರು ತಿಂಗಳಿಗೆ ಒಮ್ಮೆ ಆ ನಂತರದ ತಿಂಗಳಿನಲ್ಲಿ ಬಹಿರಂಗ ಹರಾಜಿನಲ್ಲಿ ವಿಕ್ರಯಿಸಲಾಗುವುದು.

ಹರಾಜು ನಡೆಯುವ ದಿನ, ದಿನಾಂಕಗಳನ್ನು ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸ ಲಾಗುವುದು.

ಹರಾಜಿನಲ್ಲಿ ಪಾಲುಗೊಳ್ಳುವರು ನಿರ್ಣಯಿಸಿದ ಠೇವಣಿಯನ್ನು ಕಟ್ಟಿ ಹರಾಜಿನಲ್ಲಿ ಪಾಲುಗೊಳ್ಳಬಹುದು.

ಇತರ ವಿವರಗಳಿಗೆ ದೂರವಾಣಿ ಸಂಖ್ಯೆ 32201 ಅಥವಾ 31777 ವಿಸ್ತರಣ 4261 ಕ್ಕೆ ಫೋನ್ ಮಾಡಿಯಾಗಲೀ ಅಲ್ಲದಿದ್ದಲ್ಲಿ ಉಪಕಾರ್ಯನಿರ್ವಹಣಾಧಿಕಾರಿ (ಖಜಾನೆ) ತಿ. ತಿ. ದೇವಸ್ಥಾನಗಳು ತಿರುಪತಿ ಇವರನ್ನು ಖುದ್ದಾಗಿ ವಿಚಾರಿಸಿ ವಿವರಗಳನ್ನು ತಿಳಿಯಬಹುದು.

ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
ಸಂಶೋಧನ ಕೇಂದ್ರ - ತಿರುಪತಿ

### ಒಂದು ವಿನಂತಿ

ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕ ಭಂಡಾರವಾಗಿ, ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶಹೊಂದಿದೆ. ಈಗ 40,000 ಕ್ಕಿಂತ ಹೆಚ್ಚು ಪುಸ್ತಕಗಳಿವೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ - ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ, ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ. ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -

ವಿಶೇಷಾಧಿಕಾರಿ,
ಶ್ರೀ ವೆಂಕಟೇಶ್ವರಕೇಂದ್ರ ಗ್ರಂಥಾಲಯ
ಹಾಗೂ
**ಸಂಶೋಧನ ಕೇಂದ್ರ**
ತಿರುಪತಿ - 517 502.



# 2002 ಏಪ್ರಿಲ್ ತಿಂಗಳಿನಲ್ಲಿ ಶ್ರೀವಾರಿಸೇವೆ

ಏಪ್ರಿಲ್ ತಿಂಗಳಿನಲ್ಲಿ ಶ್ರೀವಾರಿ ಸೇವೆ ಯಥಾಪ್ರಕಾರ ಜನಪ್ರಿಯತೆಯ ಇನ್ನೊಂದು ಮಜಲಿಗೆ ಏರಿ ಮುನ್ನಡೆಯಿತು. ಈ ತಿಂಗಳಿನಲ್ಲಿ ಒಟ್ಟು 2509 ಮಂದಿ ಶ್ರೀವಾರಿಸೇವೆಯಲ್ಲಿ ಪಾಲುಗೊಂಡರು. ಇವರಲ್ಲಿ ಮಹಿಳೆಯರು ಸ್ವಲ್ಪ ಅಧಿಕವೆಂಬುದನ್ನು ಕಾಣಬಹುದು. ಪುರುಷರು 1197 ಮಂದಿಯಾದರೆ ಮಹಿಳೆಯರು 1312 ಮಂದಿ ಯಿದ್ದರು.

ತಮಿಳುನಾಡಿನ ಚೆನ್ನೈಯಿಂದ ಅಕೌಂಟೆಂಟ್ ಆಗಿರುವ ಶ್ರೀ ಎಂ. ರಾಮಮೂರ್ತಿ ಅವರು 23 ಮಂದಿಯೊಡನೆ ಬಂದಿದ್ದರು. 21 ರಿಂದ 28 ರವರೆಗೆ ಸೇವೆ ಮಾಡುವ ಉದ್ದೇಶದ ಅವರ ತಂಡಕ್ಕೆ. 52 ವಯಸ್ಸಿನ ಶ್ರೀ ಅರುಣಗಿರಿ ನಾಯಕರು. ಒಂದಿಬ್ಬರ ಹೊರತು ಮಿಕ್ಕೆಲ್ಲರೂ ಸರ್ಕಾರೀ ಕೆಲಸದವರೇಯೆ. ಬಹುಮಂದಿ ಶಾಲಾ ಉಪಾಧ್ಯಾಯರು. ಹಾಗಾಗಿ ಬೇಸಿಗೆಯ ರಜೆಯನ್ನು ಸೂಕ್ತವಾಗಿ ಸ್ವಾಮಿಯ ಸೇವೆಯಲ್ಲಿ ಸ್ವಾಮಿಭಕ್ತರ ಸೇವೆಯಲ್ಲಿ ಕಳೆಯುವುದು ಅವರ ಉದ್ದೇಶವಾಗಿದ್ದಿತು. ಕಲ್ಯಾಣಕಟ್ಟೆಯಲ್ಲಿಯೂ ಯಾತ್ರಿಕರಿಗೆ ತಕ್ಕ ಸಲಹೆ ಸೂಚನೆಗಳನ್ನು ನೀಡುತ್ತ ಕೆಲಸ ಮಾಡುತ್ತಿದ್ದರು.

ತಾಡಪತ್ರಿಯಿಂದ ಬಂದವರು ವಿಕಾಸತರಂಗಿಣಿಯ 13 ಮಂದಿ. ಅವರಲ್ಲಿ ಅನಂತಮ್ಮ ಹಿರಿಯಾಕೆ. 74 ವರ್ಷ. ತರಕಾರಿ ಹೆಚ್ಚುತ್ತ ಬೆಳಗ್ಗೆ ಕೆಲಸ ಮಾಡಿದ್ದೇ ಅಲ್ಲದೆ ಮಧ್ಯಾಹ್ನದಲ್ಲಿ ಬಡಿಸಲು ಸೌಟು ಹಿಡಿದು ನಿಂತಿದ್ದರು. ಏನು ತಾಯಿ ತಮಗೆ ಸುಸ್ತಾಗದೇ ಎಂದು ಕೇಳಿದರೆ ''ದೇಹಕ್ಕೆ ಗೊತ್ತಾಗುತ್ತದೆ. ಸುಸ್ತಾದಾಗ ಕುಳಿತರೆ ಆಯಿತು. ಕೆಲಸ ಮಾಡುವಲ್ಲಿ ಎಂತಹ ತೊಂದರೆಯು ಇಲ್ಲ. ಕೆಲಸ ಮಾಡಿದಮೇಲೆ ನಿದ್ದೆಯೂ ಚೆನ್ನಾಗಿ ಬರುತ್ತದೆ. ಸ್ವಾಮಿ ಸೇವೆಯಲ್ಲವೇ ಆದರದೇ ಮಹಿಮೆಯಿರಬೇಕು'' - ಎಂದರು. ಕಲಾವತಿ ಎಂಬಾಕೆ 'ಮನೆಯಲ್ಲಿ ಸೊಸೆ ನೋಡಿ ಕೊಳ್ಳುತ್ತಾಳೆ ಹಾಗಾಗಿ ನಾನು ಇಲ್ಲಿ ನಿಶ್ಚಿಂತೆಯಿಂದ ಸ್ವಾಮಿ ಸೇವೆಯಲ್ಲಿ ತೊಡಗಿದ್ದೇನೆ' ಎಂದರು.

ರಾಯದುರ್ಗದಿಂದ ಐವತ್ತು ಮಂದಿ ಶ್ರೀವಾರಿಸೇವೆಗೆ ಬಂದಿದ್ದರು. 24 ರಿಂದ 30 ನೇ ತಾರೀಖಿನವರೆಗೆ ಸೇವೆಯ ದಿನಗಳು. ಐವತ್ತೇ ಮಂದಿ ಹೇಗೆ ಬಂದಿರಿ ಎಂದರೆ 'ಬಸ್ ತುಂಬಿ ಹೋಯಿತು, ಆದ್ದರಿಂದ ಹೆಚ್ಚು ಜನಬರಲಿಲ್ಲ.' ಇವರೆಲ್ಲರಿಗೆ ಭಾವಚಿತ್ರ ಸಹಿತವಾದ ಗುರುತಿನ ಚೀಟಿ ಶ್ರೀವಾರಿ ಸೇವೆಗೆಂದೇ ವಿಶೇಷವಾಗಿ ಮಾಡಿಸಿದ್ದು ನಿವೃತ್ತ ಕಾಂಪೌಂಡರ್ ಆದಂತಹ ಶ್ರೀ ಸುಬ್ಬರಾಯುಡು ಹೇಳುವಂತೆ ''ಜನ ಬರುತ್ತೇವೆ ಎಂದರು ನಾವೇ ಮುಂದಿನ ಬಾರಿ ಎಂದೆವು''. ಬೇರೆ ಬೇರೆ ಊರಿನ ಬಂಧುಗಳೂ ಬಂದಿದ್ದಾರೆ. ಭಾರತೀ ರತ್ನ - ರಾಯಚೂರಿನಾಕೆ ಎಸ್ ಅನಸೂಯ ಬೆಂಗಳೂರಿನವರು. ಹಲವರು ಮೊದಲಬಾರಿಗೆ ಬಂದವರಾದರೆ ಮತ್ತೆ ಹಲವರು ಎರಡನೆಯ ಬಾರಿ ಸ್ವಾಮಿ ಸೇವೆಗೆಂದೇ ಬಂದವರು.

ಈರೋಡಿನ ಬ್ಯಾಂಕ್ ನೌಕರರ ಶ್ರೀವಾರಿಸೇವೆಯ ಬಗ್ಗೆ ಹೇಳಬೇಕು. 21 ರಿಂದ 27 ರವರೆಗೆ ಶ್ರೀವಾರಿಸೇವೆಯಲ್ಲಿ ನಿರತರಾಗಿದ್ದ ಈ ಗುಂಪಿಗೆ ಐ.ಓ.ಬಿ.ಯ ಸುಧಾಶಂಕರ್ ನಾಯಕಿ. ಮಲ್ಲಿಕಾ ಇಂಡಿಯನ್ ಬ್ಯಾಂಕ್ ನವರು, ಗೀತಾ ಪೋಸ್ಟ್ ಆಫೀಸಿನವರು. ಚಂದ್ರಶೇಖರನ್ ಕೆನರಾಬ್ಯಾಂಕಿನವರು, ಯಾತ್ರಿಕರ ಸೇವೆಗೆಂದು ಎಲ್ಲರೂ ರಜೆ ಪಡೆದು ಬಂದವರು. ಇವರ ಮಧ್ಯೆ ಗೃಹಿಣಿ ಲಲಿತಾ ಅವರೂ ಇದ್ದಾರೆ. +2 ಓದು ಮುಗಿಸಿದ ಚಂದನ್‌ಲಾಲ್, 10 ನೇ ತರಗತಿ ಪರೀಕ್ಷೆ ಮುಗಿಸಿದ ಸಂಧ್ಯ - ಎಲ್ಲರಿಗೂ ಒಂದೇ ಗುರಿ ಶ್ರೀವಾರಿ ಸೇವೆಯನ್ನು ಮತ್ತೆ ಮತ್ತೆ ಬಂದು ಮಾಡಬೇಕು. ಸುಧಾ ಅವರು ಹೇಳುವಂತೆ ''ಇದೊಂದು ಒಳ್ಳೆಯ ಅವಕಾಶ, ಸೇವೆಯನ್ನು ಮಾಡಲಿಕ್ಕೆ ಉತ್ತಮ ಸಂಸ್ಕಾರ ಪಡೆಯಲಿಕ್ಕೆ''. ಚಂದ್ರಶೇಖರನ್ ಹೇಳುವಂತೆ - ಇಂಡಿಯಾ





## ಏಪ್ರಿಲ್ ತಿಂಗಳ ಶ್ರೀವಾರಿ ಸೇವಾ ಬೃಂದಗಳು

| | ಹೆಸರು | ಊರು | ಸದಸ್ಯ ಸಂಖ್ಯೆ |
|---|---|---|---|
| 1. | ಶ್ರೀವಾರಿ ಸೇವಾ ಸಮಿತಿ | ಚೆನ್ನೈ | 11,32,14,23 (ಪ್ರತಿ ಭಾನುವಾರ) |
| 2. | ಕುಪ್ಪುಲು ಬೃಂದ | ಸೇಲಂ | 34 |
| 3. | ಅನ್ನಮಯ್ಯ ಸೇವಾ ಟ್ರಸ್ಟ್ | ಸೇಲಂ | 19 |
| 4. | ಶ್ರೀ ಕೋದಂಡರಾಮ ಭಕ್ತಸಮಾಜ | ವೇಮೂರು | 05 |
| 5. | ಜನಕಲ್ಯಾಣ ಭಕ್ತಬೃಂದ | ಕಂಚಿ | 36 |
| 6. | ಜನಕಲ್ಯಾಣ ಸೇವಾದಳ | ಕಂಚಿ | 46 |
| 7. | ಪರಮೇಶ್ವರನ್ ಬೃಂದ | ತಿರುನಲ್ವೇಲಿ | 08 |
| 8. | ಸತ್ಯವತಿ ಬೃಂದ | ಯರ್‍ರಂಪಲ್ಲಿ | 07 |
| 9. | ಸುಬ್ರಹ್ಮಣ್ಯಂ ಬೃಂದ | ಕೊಯಮತ್ತೂರು | 07 |
| 10. | ಜಗನ್ನಾಥಂ ಬೃಂದ | ಕೊಯಮತ್ತೂರು | 27 |
| 11. | ವಾಸವೀ ಮಹಿಳಾ ಮಂಡಳಿ | ಹೊಸಪೇಟೆ | 27 |
| 12. | ದೊರೈಬಾಲನ್ ವೃಂದ | ಕೊಯಮತ್ತೂರು | 28 |
| 13. | ಮಧು ಶಂಕರ್ | ಊಟಿ | 12 |
| 14. | ಅಖಿಲಭಾರತ ಅಯ್ಯಪ್ಪಸೇವಾ ವೃಂದ, | ಊಟಿ | 06 |
| 15. | ರಘುನಂದನ ವೃಂದ | ಹಿರಿಯೂರು | 09 |
| 16. | ಕುಪ್ಪುಸ್ವಾಮಿ ವೃಂದ | ಮಧುರೈ | 12 |
| 17. | ಸುಧಾ ವೃಂದ | ಲೋನ್ ಮಹಾರಾಷ್ಟ್ರ | 09 |
| 18. | ಸೆಲ್ವಕುಮಾರ್ | ಸೇಲಂ | 06 |
| 19. | ಸುಬ್ಬರಾಯುಡು | ರಾಯದುರ್ಗ | 50 |
| 20. | ರಾಧಾಕೃಷ್ಣ | ಕೊಯಮತ್ತೂರು | 04 |

ದೇಶ ಎಷ್ಟು ದೊಡ್ಡದು ಎಂಬುದು ಇಲ್ಲಿ ತಿಳಿಯುತ್ತದೆ. ಆದ್ದರಿಂದ ಈ ಸೇವೆ ಅತ್ಯಗತ್ಯ.

ಇವರೆಲ್ಲರ ನಡುವೆ ಹಿರಿಯೂರಿನ ಹುಡುಗರನ್ನು - ಹಿರಿಯರನ್ನು ಹೆಸರಿಸಬೇಕು. ರಘುನಂದನರ ಹಿರೇಮಣಿತನದಲ್ಲಿ ಬಂದ ಒಂಭತ್ತು ಮಂದಿ ಹುಡುಗರ ತಂಡವಿದು. 22 ರಿಂದ 29 ರ ವರೆಗೆ ವಯಸ್ಸು. ಸೇವೆ ಮಾಡುವ ಉದ್ದೇಶದಿಂದ ಕಳೆದ ಅಕ್ಟೋಬರ್‌ನಿಂದ ಕಾದು ನಿಂತ ತಂಡ. ಪುರುಷೋತ್ತಮ ಅವರು ಹೇಳುವಂತೆ ಎಲ್ಲ ಹುಡುಗರು ಡಿಗ್ರಿ ಓದಿದವರು. ಎಲ್ಲರಿಗೂ ಸೇವೆಯಲ್ಲಿ ಆಸಕ್ತಿ. ಎಂ. ಕೆ. ರಾಘವೇಂದ್ರ ಹೇಳುವಂತೆ 'ಎಲ್ಲರೂ ಊರಿನಲ್ಲಿ ಸಾಮಾಜಿಕ ಕಾರ್ಯಗಳಲ್ಲಿ ಸೇವಾ ಭಾವದಿಂದ ಭಾಗವಹಿಸಿ ಅಭ್ಯಾಸ ವಿರುವವರೇ. ಹಾಗಾಗಿ ಹೊಸತನ ಸೇವೆ ಮಾಡುವುದರಲ್ಲಿ ಇಲ್ಲ. ಇಲ್ಲಿ ಮಾಡುವುದರಲ್ಲಿ ಎಂದರೆ ತಿರುಮಲೆಯ ಯಾತ್ರಿಕರ ಸೇವೆ ಮಾಡುವುದರಲ್ಲಿ ಇದೆ'. ವೆಂಕಟೇಶ ಅವರು ತಿಳಿಸುವಂತೆ ಊರಿನಲ್ಲಿ ಮಾಡಿದ ಸೇವೆ ಇಲ್ಲಿ ಕೆಲಸಕ್ಕೆ ಬರುತ್ತಿದೆ ಹೆಚ್ಚು ಚೆನ್ನಾಗಿ ಕೋ ಆರ್ಡಿನೇಟ್ ಆಗಿ ಮಾಡಲು ಅವಕಾಶವಾಗಿದೆ. ರಾಮಚಂದ್ರ ಶೆಟ್ಟಿಯವರಿಗೆ ಇದು ಜೀವನದ ಪರಮ ಸಾರ್ಥಕ ಸೇವೆ. ದೊಡ್ಡ ಕೆಲಸವಾದರೆ, ನರಸಿಂಹ ಮೂರ್ತಿ ಅವರಿಗೆ ನಾಲುವರಂತೆ ನಾನೂ ಸೇವಾದಾರನಷ್ಟೆ ನನ್ನದೇನು ಹೆಚ್ಚಿಗೆ ಇಲ್ಲ - ಎಂಬ ಧನ್ಯತಾ ಭಾವ. ಸಂತೋಷ ಕುಮಾರ್ ಅವರಿಗೆ ಈ ಕೆಲಸವೂ ಒಂದು ಸಂತೋಷದ ವಿಷಯ, ಪುನಃ ಬಂದು ಮಾಡತಕ್ಕ ವಿಷಯ. ಇದರಿಂದ ಒಳ್ಳೆಯ ಸಂಸ್ಕಾರ ದೊರೆಯುತ್ತದೆ. ಸ್ವಾಮಿಯನ್ನು ನೋಡಿದ ಸುಖ ಇಮ್ಮಡಿಯಾಗುತ್ತೆ. ಎಚ್. ಎಸ್. ರಂಗನಾಥ್ ಅವರಿಗೂ ಅಷ್ಟೆ. ಇಲ್ಲಿ ಯಾತ್ರಿಕರ ಸೇವೆ ಮಾಡಿದರೆ, ಆಲಯ ಪ್ರವೇಶದ ಅರ್ಹತೆ ಪಡೆದಂತೆ ಆಗುತ್ತೆ. ಒಂದು ಸೇವಾವಕಾಶ ಒಂದು ಪರಮಾರ್ಥಕ್ಕೆ ದಾರಿಯಾದರೆ ಯಾಕೆ ಬೇಡ ಎನ್ನಬೇಕು. ಎಸ್ ಬಾಲಾಜಿ ಅವರಿಗಾದರೋ ಇದೊಂದು ಭಾಗ್ಯವಷ್ಟೇ ಅಲ್ಲದೆ ಒಂದು ಪುಣ್ಯವೂ ಹೌದು.

★★★★★



ಮನವನಿತ್ತೆ ನಿನಗೆ ಮಲೆಯಪ್ಪಸ್ವಾಮಿಯೆ.

# ಚೆನ್ನಯ್ಯನ - ಪದ್ಮಿನೀ ಪರಿಣಯ

- ಕಂದಾಡೈ ಕೇಶವನ್.

ಸುಮಾರು ಹದಿನೆಂಟನೆಯ ಶತಮಾನದಲ್ಲಿ ರಚಿತವಾದ ಚೆನ್ನಯ್ಯನ ಪದ್ಮಿನೀ ಪರಿಣಯ ಸಾಂಗತ್ಯ ಕಾವ್ಯವು ಶ್ರೀ ವೆಂಕಟೇಶ್ವರ ಪದ್ಮಾವತಿಯರ ವಿವಾಹದ ಕಥೆ. ಇದು ಮೂರು ಅಶ್ವಾಸಗಳ ಒಟ್ಟು ಹದಿನೆಂಟು ಸಂಧಿಗಳಿಂದ ಕೂಡಿದ ಕಾವ್ಯ. ಕವಿ ಹದಿನೆಂಟು ಸಂಖ್ಯೆಗೆ ಮಹತ್ವಕೊಟ್ಟು, ಅಷ್ಟಾದಶ ಪುರಾಣ ಭಗವದ್ಗೀತೆಯ 18 ಅಧ್ಯಾಯಗಳು ಇವುಗಳನ್ನು ಗುರಿಯಿಟ್ಟುಕೊಂಡೇ ಈ ಕಾವ್ಯ ರಚಿಸಿರಬೇಕು. ಈತನು ಚೆನ್ನಕೇಶವನ ಭಕ್ತನಿರಬೇಕು. ಪ್ರತಿ ಸಂಧಿಯ ಮೊದಲು ಕೊನೆಯಲ್ಲಿ ಚೆನ್ನಕೇಶವನನ್ನು ಸ್ತುತಿಸುತ್ತಾನೆ. ಪ್ರತಿ ಸಂಧಿಯ ಪ್ರತಿಸಂಧಿಯ ವಿಷಯವನ್ನು ತನ್ನ ದೊರೆ ವೀರನೃಪನಿಗೆ ನಿವೇದಿಸುತ್ತಾನೆ. ತಾನು ರಚಿಸಿದ ಕಾವ್ಯ ಶ್ರೀನಿವಾಸ ಪದ್ಮಾವತಿಯರ ವಿವಾಹದ ಕಥೆ. ಈ ಕಥೆಯ ವರಾಹಪುರಾಣದ ಆಧಾರದಿಂದ ರಚಿತವಾಗಿದೆ ಎಂದು ತಿಳಿಸಿದ್ದರೂ ಬಹುಮಟ್ಟಿಗೆ ಈ ಕಾವ್ಯ ಸ್ಕಾಂದ ಪುರಾಣದ ವೆಂಕಟಾಚಲ ಮಾಹಾತ್ಮ್ಯ ಕಥೆಯ ವಿವರಣೆಗೆ ಸಮೀಪವಾಗಿದೆ. ಕಾವ್ಯದ ಪ್ರಾರಂಭದಲ್ಲಿ ಕವಿ-

[illegible]
[illegible]
[illegible]
[illegible]

[illegible] ಸೂಕ್ತದ-

ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ
ಪದ್ಮಾಲಯೇ ಪದ್ಮದಳಾಯತಾಕ್ಷಿ।
ವಿಶ್ವಪ್ರಿಯೇ ವಿಷ್ಣುಮನೋನುಕೂಲೇ
ತ್ವತ್ಪಾದ ಪದ್ಮಂ ಮಯಿ ಸನ್ನಿಧತ್ಸ್ವ ||

ಎಂಬುವ ಋಗ್ವೇದದ ಋಕ್ಕಿನ ಭಾವವನ್ನೇ ಈ ಪದ್ಯದಲ್ಲಿ ಉದ್ಘೋಷಿಸಿದ್ದಾನೆ :

ಪದ್ಮೆ ಪದ್ಮಾಲಯೆ ಪದ್ಮಭವಾಂಬಿಕೆ
ಪದ್ಮೋದರನ ಭಾಮಿನಿ ಪದ್ಮಿನಿ
ಪರಿಣಯ ಕಥೆ ಪೇಳ್ವೆ ನೆನ್ನ ಹೃ
ತ್ಪದ್ಮದೊಳಿರು ಪದ್ಮನಯನೆ

ಮುಂದೆ ಧಾರುಣಿಯೊಳು ಕರ್ನಾಟ ದೇಶದ ಕಾವೇರಿಯ ತೀರದೊಳೆಸವ ಶ್ರೀರಂಗ ಪಟ್ಟಣವನು ಸುಖದಿಂದ ಮಹಿಶೂರ ಕೃಷ್ಣೇಂದ್ರನಾಳ್ದಪನು ಎಂಬುವುದಾಗಿ ಶ್ರೀಕೃಷ್ಣರಾಜ ಒಡೆಯರನ್ನು ಸ್ಮರಿಸಿ ಅವರಲ್ಲಿ ಪ್ರಸಿದ್ಧನಾದ ಸೇನಾನಿ ವೀರೇಂದ್ರ ಚಂದ್ರನು ತನಗೆ ಆಶ್ರಯದಾತನೆಂದು ಆತನಿಗೆ ಕಾವ್ಯದ ಪ್ರತಿ ಆಶ್ವಾಸದಲ್ಲೂ ಕಥೆಯ ಸಾರಾಂಶವನ್ನು ತಿಳಿಸುತ್ತಾನೆ. ಕವಿಯ ಕಾಲ ಸುಮಾರು 1720 ಆಗಿರಬಹುದು. ಮೊದಲನೆಯ ಆಶ್ವಾಸದ 53, 54, 55 ಪದ್ಯಗಳಲ್ಲಿ ಚೆನ್ನಕೇಶವರೂಪ ಶ್ರೀ ವೆಂಕಟೇಶನ ಸನ್ನುತ ಪರಿಣಯ ಕಥೆಯನ್ನು ಹೇಳುವೆ ಸದ್ಗುಣ ಸಂಪನ್ನಕೇಳ್ವುದು ವೀರೇಂದ್ರ. ಕೃತಿ ವಾರಾಹ ಪುರಾಣದ ಕಥೆ. 'ಈ ಕೃತಿಗೆ ಒಡೆಯನು ವೆಂಕಟೇಶ. ಕೃತಿಯಿದು ಲಕ್ಷ್ಮೀಪತಿ ಸಂಸ್ತುತಿ ಸಮ್ಮತಿ ವಸುಮತಿಯ ಸಜ್ಜನರ, ಕ್ಷಿತಿಜೆ ಪದ್ಮಿನಿಯ ವಿವಾಹದ ಲಕ್ಷ್ಮೀಪತಿ ಯೆಸಗಿದ ಕಥೆಯಾಗೆ ಕೃತಿಗೆ ಸಲ್ಲುವುದು ಪದ್ಮಿನೀ ಪರಿಣಯ ವೆಂಬ ಅತಿಶಯ ನಾಮಧೇಯಕವು' ಎಂಬುವುದಾಗಿ ಚೆನ್ನಯ್ಯ ಕವಿ ತನ್ನ ಕಾವ್ಯ ಕಥನವನ್ನು ಪ್ರಾರಂಭ ಮಾಡುತ್ತಾನೆ.

ಮೇರುಗಿರಿಯ ದಕ್ಷಿಣ ದಿಶೆಯಲ್ಲಿ ಶುಭದಾಮ ನಿರಾಮಯವೆನಿಸಿ ಸೀಮೆಯೊಪ್ಪಿದುದು ಸಕಲ ಸೌಭಾಗ್ಯ ಸುಧಾಮಯ ತೊಂಡಮಂಡಲ ವೆಂಬ ದೇಶ.



ಆದರ ರಾಜದಾನಿ ನಾರಾಯಣಪುರ - ಭೂನಾರಿಯ ರತಿಗೆಳಸಿ ಧರೆಗಿಳಿದ ಬಂದ ಗೋವಿಂದ ಅಲ್ಲಿಯೇ ನೆಲಸಿದ್ದರಿಂದ ಆ ಪುರಿ ನಾರಾಯಣ ಪುರಿಯಾಯ್ತು. ಕವಿ ಆ ಪುರವನ್ನು ವರ್ಣಿಸುವಾಗ 'ಮಡಿಯೆಂಬರು ಶುಭ್ರ ವಸನಂಗಳನು ಇಮ್ಮಡಿಯೆಂಬರು ದ್ವಿಗುಣವನು ಕಳಕಳವೆಂಬುದು ಹಕ್ಕಿಗಳ ಕಲರವ ಪುಷ್ಪವಾಟಿಯೊಳು ಕೊಡೆಯೆಂಬರು ಸತ್ತಿಗೆಯನು ಜಡನೆಂಬರು ಉದಕವ' ಹೀಗೆ... ಅಲಂಕಾರವನ್ನು ಬಳಸಿ ಸುಮಾರು ಇಪ್ಪತ್ತು ಪದ್ಯಗಳಲ್ಲಿ ಆ ನಾಡಿನವರ್ಣನೆ. ಅಲ್ಲಿನ ರಾಜ ಚಂದ್ರವಂಶದ ಮಿತ್ರವರ್ಮ. ಅವನ ಸುತ ಆಕಾಶರಾಜ. ಪಾಂಡ್ಯದೇಶದ ರಾಜಕುವರಿ ಧರಣಿದೇವಿ ಈತನ ಸತೀಮಣಿ, ಪಟ್ಟದರಾಣಿ. ಅವರಿಬ್ಬರದು ದೇಹ ಉಸಿರುಗಳಂತೆ ಚಂದ್ರ ಬೆಳದಿಂಗಳಂತೆ ಹೂವು ಕಂಪಿನಂತೆ ಅನ್ಯೋನ್ಯ ದಾಂಪತ್ಯ. ಸುಖಮಯಜೀವನವನ್ನು ನಡೆಸುತ್ತಿರುತ್ತಾರೆ. ಒಂದು ದಿನ ರಾಣಿ ಸಖಿಯ ಕೈಯ್ಯಲ್ಲಿದ್ದ ಗಿಣಿಮರಿಗೆ ಆಹಾರವನ್ನು ನೀಡುತ್ತಿದ್ದಾಗ ಆ ಮರಿ ರಾಣಿಯನ್ನು ಕುರಿತು ನೀನೇ ತಾಯಿ ಎನ್ನಯ ಕುಲದೈವವು ನೀನೆನೆಗೊಡೆಯಳು ನೀನೆ । ನೀನಲ್ಲ ದನ್ಯರ ನೊಲ್ಲೆನೆಂದಾ ಗಿಳಿ ಮಾನಿನಿಯೊಡನಾಡಿದುದು। ಈ ಗಿಳಿಯ ಮಾತನ್ನು ಕೇಳಿ ರಾಣಿ ಅದನ್ನೆತ್ತಿ ಪಂಜರದಲ್ಲಿಟ್ಟು ತೂಗುತ್ತಾಳೆ. ಈ ದೃಶ್ಯವನ್ನು ಕಂಡ ಪಕ್ಕದ ಸಖಿಯ ಕಣ್ಣಲ್ಲಿ ನೀರೂರುತ್ತದೆ. ''ಮಹಾರಾಣಿ ಶೀಘ್ರವಾಗಿಯೇ ನಿನಗೂ ಮಗನೋ ಮಗಳೋ ಹುಟ್ಟುತ್ತಾಳೆ ನಾರಾಯಣನ ಕರುಣೆ ಬರಬೇಕು'' ಎಂಬುವುದಾಗಿ ನುಡಿದಾಗ ಧರಣಿ ದೇವಿಗೆ ತಾಯ್ತನದ ಹಂಬಲ ತಲೆದೋರಿ ಮಕ್ಕಳಿಲ್ಲಮನೆ ರಕ್ಕಸಪೊಳಲು ಎಂದು ಚಿಂತಿಸಿ ದುಃಖಿ ಸುತ್ತಿರುವಾಗ ಇದನ್ನು ಕೇಳಿದ ಆಕಾಶರಾಜನು ರಾಣಿಯನ್ನು ಸಂತೈಸಲು ಬರಲು ರಾಣಿ ''ಸಂತತ ಸಕಲ ಸೌಭಾಗ್ಯಗಳುಂಟು ನಿ। ರಂತರ ಭೋಗ ಗಳುಂಟು ಸಂತೋಷವ ನಿಹ ಪರದೊಳು ಪುಟ್ಟಿಪ। ಸಂತಾನವ ಕಾಣೆ ನಮ್ಮ''. ಸುತರಿಲ್ಲದವರಿಗೆ ಗತಿಯಿಲ್ಲವಂತೆ ಬಂಜೆಯು ವ್ರತನಿಯಮಗಳಿಗೆ ಅರ್ಹಳಲ್ಲವೆಂದು ಬುಧರು ತಿಳಿಸುವರು. ನಾನು ಬಂಜೆಯೆಂದು ಕರೆಸಿಕೊಳ್ಳಲಾರೆ ಎಂಬುವುದಾಗಿ ತಿಳಿಸಿ ತಾನು ಕಾಡಿಗೆ ಹೋಗಿ ತಪಸ್ಸನ್ನು ಮಾಡುವೆನೆಂದು ಹೇಳಿದಾಗ ರಾಜ ''ರಾಣಿ, ನೀನು ಇಲ್ಲದೆ ನಾನೂ ಇಲ್ಲ. ತಪಸ್ಸಿಗೆ ಹೊರಡುವ ಮುಂಚೆ ಕೊನೆಯ ಪ್ರಯತ್ನ ಮಾಡೋಣವೆಂದು ತಿಳಿಸಿ ಆಪ್ತರ ಮಂತ್ರಿಗಳ ಮಾತಿನಂತೆ ಮಕ್ಕಳ ಲಾಭಕ್ಕಾಗಿ ಯಾಗವನ್ನು ಮಾಡಲು ರಾಜ ನಿಶ್ಚಯಿಸಿದನು. ಆ ದಿನ ರಾತ್ರಿ ರಾಜನಿಗೆ ಕಾಮಧೇನು ಕಾಣಿಸಿಕೊಂಡು ಮುದ್ದಾದ ಮಗುವನ್ನು ಬಾಯಿಂದ ಉಗುಳಿದಾಗ ಅಲ್ಲಿಗೆ ಬ್ರಾಹ್ಮಣನೊಬ್ಬನು (ವಿಷ್ಣುವು) ಬಂದು ಆ ಮಗುವನ್ನು ಕೊಡುವಂತೆ ಕನಸಾಗುತ್ತೆ. ಆಕಾಶರಾಜನು ಯಾಗ ಮಾಡಲು ಅಣಿಯಾದಾಗ ಅರಣೀನದಿಯ ತೀರದಲ್ಲಿ ಸ್ನಾನಮಾಡಿ ವಿಘ್ನೇಶ್ವರನ ಪೂಜೆ ಮಾಡಿ ಭೂಮಿ ಶುದ್ಧಿಮಾಡುತ್ತಿದ್ದಾಗ ನೇಗಿಲಿನ ತುದಿಗೆ ಏನೋ ಸಿಕ್ಕಿದಂತಿರಲು ಒಂದು ಹೊನ್ನ ಕರಂಡಕ. ಮುಚ್ಚಳವನ್ನು ತೆಗೆದಾಗ ಆಶ್ಚರ್ಯಕಾದಿತ್ತು. ಅಲ್ಲಿ ಸುಧಾಕರ ಕಲೆಯ ಸಾಕಾರದಂತಹ ಶಿಶುವಿನ ಸುಂದರ ಕನ್ನಿಕೆಯು. ಹಿಂದೆ ಪೊನ್ನಿನ ನೇಗಿಲಿಗೆ ಸಿಕ್ಕಿದ ಸೀತೆ ಜನಕರಾಜನ ಕುವರಿಯಾದಂತೆ.'' ಈ ಘಟ್ಟದಲ್ಲಿ ಕವಿ ಚೆನ್ನಯ್ಯ ಆಕಾಶರಾಜನ ಮಾತುಗಳಲ್ಲಿ ಹೆಂಡತಿ ಧರಣಿ ದೇವಿಗೆ ತನ್ನ ಸಂತಸವನ್ನು ನಾಲ್ಕು ಸಾಂಗತ್ಯ ಪದ್ಯಗಳಲ್ಲಿ ತಿಳಿಸುತ್ತಾನೆ. ''ಎಲ್ಲೆ ದೇವಿ ಚಿತ್ತೈಪುದು ನಿನ್ನಯ ಪುಣ್ಯ ಫಲಗಳನಭಿವರ್ಣಿಪಡೆ..... ಜನಕ ನಂದನೆ ಧರೆಯೊಳು ಪುಟ್ಟಿದಂದದಿಂ। ಜನನಾಥಗೆ ಧರಣಿಯಲಿ । ತನಯಳುದ್ಭ ವಿಸಿದಳೆಂದನೆ ರೋಮಾಂ । ಚನೆಗಾತ್ರ ಯಾದಳು ಧರಣಿ'' ಮಗುವು ದೊರೆತ ಸಂತಸಕ್ಕೆ ದೊರೆ ತುಲಾ ದಾನವನ್ನು ನೀಡುತ್ತಾನೆ. ಸಕಲರಾಜರನ್ನು ಆಪ್ತರನ್ನು ಬರಮಾಡಿಕೊಂಡು ಶಾಸ್ತ್ರೋಕ್ತವಾಗಿ ಜಾತ ಕರ್ಮವನ್ನು ನೆರವೇರಿಸುತ್ತಾನೆ. ವಿರಚಿಸಿದನು ನಾಮಕರಣವ ಕುಲವೃದ್ಧರ ಬುಧ ಜನರ ಸುಮತಿಯಿಂ ನೆರೆ ಪದ್ಮಪತ್ರವಿಶಾಲಾಕ್ಷಿ ಯಾಗಲು ಹರುಷದಿಂ ಪದ್ಮಿನಿಯೆಂದು. ಪದ್ಮಪತ್ರದಂತೆ ವಿಶಾಲಾಕ್ಷಿ ಯಾದ ಆ ಶಿಶುವನ್ನು ಪದ್ಮಿನಿಯೆಂದು ಕರೆದರು- ಪದ್ಮಿನಿಯು ದಿನದಿನಕ್ಕೆ ಬೆಳೆದು ಅಂತಃಪುರದ ಬೆಳಕಾಗಿ ಮೆರೆಯುತ್ತಾಳೆ. ಒಮ್ಮೆ ಆಕಾಶವಾಣಿಯೊಂದು ''ಈ ಶಿಶು ಸಾಮಾನ್ಯ ಶಿಶುವಲ್ಲ, ದೇವತಾಶಿಶು, ಸರ್ವಲೋಕ ಶರಣ್ಯನಾದ ವೆಂಕಟೇಶನನ್ನು ವರಿಸುತ್ತಾಳೆ. ಸಾಕ್ಷಾತ್ ವಿಷ್ಣುವಿಗೆ ಕನ್ಯಾದಾನ ಮಾಡುವ ಪುಣ್ಯ ಭಾಗ್ಯ ನಿಮ್ಮ ದಾಗುತ್ತೆ'' ಎಂಬುವುದಾಗಿ ಆಕಾಶರಾಜನಿಗೂ ಧರಣೀದೇವಿಗೆ ಭವಿಷ್ಯ ನುಡಿಯುತ್ತದೆ. ರಾಜ ರಾಣಿಯರು ಸಂತೋಷಗೊಳ್ಳುತ್ತಾರೆ.

ಸಕಲ ವಿದ್ಯೆಗಳನ್ನು ಕಲಿತು ರಾಮಾಯಣದ ಕಥೆಯನ್ನು ಕೇಳುವಾಗ ತಾನು ಸೀತೆ ಎಂಬುವುದನ್ನು ನೆನೆಸಿ ರಾಮನನ್ನು ಸ್ಮರಿಸುತ್ತಿದ್ದಳು. ಒಮ್ಮೆ ನಾರದರು ನಾರಾಯಣಪುರಕ್ಕೆ ಬಂದು ಪದ್ಮಾವತಿದೇವಿಯ ಲಕ್ಷಣಗಳನ್ನು ಕಂಡು ಈಕೆ ಮುಂದೆ ಶ್ರೀ ವೆಂಕಟೇಶ್ವರನನ್ನು ಕೈಹಿಡಿಯುವಳೆಂದು ತಿಳಿಸುತ್ತಾರೆ. ಮೂಲ ವರಾಹ ಪುರಾಣದ ನಾಲ್ಕನೆಯ ಅಧ್ಯಾಯದಲ್ಲಿ ನಾರದನು ಪದ್ಮಾವತಿಯ ಅಂಗಲಕ್ಷಣಗಳನ್ನು ಕಂಡು ''ದೃಶ್ಯತೇಽಯಂ ಲಲಾಟಸ್ತೇ ನೀಲಾಲಕ ಸುಶೋಭಿತಃ । ಮೂರ್ಧ್ವಾತೇ ಸಮವೃತ್ತಶ್ಚ ಸ್ನಿಗ್ಧಾಯತ ಕಚಾನ್ವಿತಃ। ಸ್ಮಿತ ಸಂಶೋಭಿತ ದಶನಂ ಬಿಂಬಾಧರ ಸಮನ್ವಿತಂ। ಮುಖಂ ತೇ ವಿಷ್ಣು ಯೋಗ್ಯಂ ಸ್ಯಾದಿತಿ ಮೇ ಧೀಯತೇ ಮತಿಃ । - ಈಕೆಯ ಶ್ರೀನಿವಾಸನಿಗೆ ಯೋಗ್ಯಳೆಂದು ನನ್ನ ಮನಸ್ಸು ಹೇಳುತ್ತಿದೆ '' ಎಂಬುವುದಾಗಿ ನುಡಿಯುತ್ತಾರೆ. ಈ ವಿಚಾರವನ್ನು ವನದಲ್ಲಿ ಸಂಚರಿಸುತ್ತಿದ್ದ ಪದ್ಮಳಿಗೆ ನಾರದರು ತಿಳಿಸಿ ಬೀಳ್ಕೊಳ್ಳುತ್ತಾರೆ. ಈ ಅಯೋನಿಜೆ ಪದ್ಮಿನಿಗೆ ಅಮಿತ ಆನಂದವಾಗುತ್ತೆ.

### ಶ್ರೀನಿವಾಸ ಪದ್ಮಾವತಿಯರ ಪ್ರಥಮ ಮಿಲನ

ಒಂದು ದಿನ ಪದ್ಮಾವತಿಯು ಸಖಿಯರೊಡನೆ ಉದ್ಯಾನವನಕ್ಕೆ ತೆರಳಿದಳು. ಅಲ್ಲಿ ಶುಭ್ರವಾದ ದಂತದ್ವಯದಿಂದ ಕೂಡಿದ ಗಜರಾಜನು ನೀರಿನಲ್ಲಿ ಫೂತ್ಕರಿಸುತ್ತಾ ಓಡಿ ಬರುತ್ತಿರುವುದನ್ನು ಕಂಡ ಸಖಿಯರು ಭಯದಿಂದ ಓಡಿಹೋಗುತ್ತಾರೆ. ಆ ದಿನ ವೆಂಕಟಾಚಲಪತಿಯಾದ ವೆಂಕಟೇಶ್ವರನು ತನ್ನ ಪರಿವಾರ ಸಮೇತ ಅರಣ್ಯಕ್ಕೆ ಬೇಟೆಗೆಂದು

ಬಂಟಿರುತ್ತಾನೆ. ಪುಲಿ, ಜಿಂಕೆ ಬೇಟೆ ಆಡಿ ಆನೆಯನ್ನು ಅಟ್ಟಿಸಿಕೊಂಡು ಬಂದಾಗ ಅದು ನೀರಿಗೆ ನುಗ್ಗಿಪೂತ್ಕರಿಸಿರುತ್ತೆ. ವರಾಹಪುರಾಣದ ನಾಲ್ಕನೆಯ ಅಧ್ಯಾಯದಲ್ಲಿ ಶ್ರೀನಿವಾಸನನ್ನು ಕುರಿತು : - ಅಕಳಂಕೇಂದು ಧವಳಂ ಜಾಂಬೂನದ ಪರಿಷ್ಕೃತಂ ಸ್ಫುರದ್ವಿದ್ಯುಲ್ಲತಾ ಯುಕ್ತ ಶರನ್ಮೇಘ ಮಿವೋನ್ನತಂ ॥ ತಸ್ಮಿಂಸ್ತು ಪುರುಷಂ ಕೃಷ್ಣಂ ಮದನಾಕಾರ ವರ್ಚಸಂ ಪುಂಡರೀಕ ದಳಾಕಾರ ಕರ್ಣಾಂತಾಯಕ ಲೋಚನಮ್ - ಕವಿ ಚೆನ್ನಯ್ಯನು ತನ್ನ ಸಾಂಗತ್ಯದಲ್ಲಿ ಶ್ರೀನಿವಾಸನನ್ನು ಕುರಿತು ಪದ್ಮಾವತಿಯ ಮನಸ್ಸಿನಲ್ಲಿ ನೂರಾರು ಕಲ್ಪನೆಗಳು ಮೂಡಿದಾಗ ''ಸುರನೋ ಸಿದ್ಧನೋ ಯಕ್ಷನೋ ಗಂಧರ್ವಕಿನ್ನರರೊಳಾವನೋ ಮೇಣಿವನು । ಪರಿಕಿಸಿ ನರನಲ್ಲ ವೆಂದೀಕ್ಷಿಸಿದಳು । ನರನಾಥ ಸುತೆ ಮನವೊಲಿದು ॥'' - ಇತ್ತ ಶ್ರೀನಿವಾಸನು ಪದ್ಮಾವತಿಯನ್ನು ಕಂಡು ಇವಳಾರೀ ನವಯುವತಿ ದಿವಿಜನಾರಿಯೋ ನಾಗಕುಲಬಾಲಕಿಯೋ ವನದೇವತೆಯೋ ಎಂಬುವುದಾಗಿ ಚಿಂತಿಸುತ್ತಾನೆ. ಆನೆಯ ವ್ಯಾಜದಿಂದ ಪದ್ಮಿನಿಯನ್ನು ಕಾಣುವ ಭಾಗ್ಯ ತನಗಾಯ್ತು ಎಂಬುವುದಾಗಿ ಶ್ರೀನಿವಾಸನು ಭಾವಿಸುತ್ತಾನೆ. ಪದ್ಮಿನಿಯನ್ನು ಕುರಿತು ಶ್ರೀನಿವಾಸನು ''ತರುಣಿ ನಿನ್ನ ದರ್ಶನ ಮಾತ್ರದಿಂದಲೇ ನನ್ನ ತನುಮನ ಅಮೃತವನ್ನು ಸೇವಿಸಿದಷ್ಟು ಸಂತಸವಾಗಿದೆ. ಅವಳ ಸ್ಪರ್ಶನ ಇನ್ನೆಷ್ಟು ಆನಂದಕರವಾಗಿರಬಹುದೆಂದು ಊಹಿಸಿ ''ಕನ್ನಡಿಗದಪಿನ ಪೆಣ್ಣೆ, ಇನ್ನೆರಡು ಅಭಿಲಾಷೆಗಳುಂಟು. ನಿನ್ನನ್ನು ನಾನು ಮೋಹಿಸಿದ್ದೇನೆ ಎನ್ನೆದೆಗಾಲಿಂಗನ ವಜ್ರ ಕವಚವು ಪೆಣ್ಣೆ ಪಾಲಿಸು ಚಂಚಲಾಕ್ಷಿ ನನ್ನ ಮದನತಾಪವನ್ನು ನಿನ್ನ ಅಧರಾಮೃತವೆಂಬ ಅತಿಮಧುರವನ್ನಿತ್ತು ಎನ್ನನ್ನು ಸಂತೈಸು'' ಎಂಬುವುದಾಗಿ ಕೇಳಿದಾಗ ವೆಂಕಟೇಶ್ವರನ ಸೌಂದರ್ಯಕ್ಕೆ ಮಾರುಹೋಗಿದ್ದ ಪದ್ಮಾವತಿ ಕುಲಶೀಲವರಿಯದ ಪುರುಷನನ್ನು ಕಂಡು ಮೆಚ್ಚಿಕೊಂಡ ತನ್ನ ಬುದ್ಧಿಯನ್ನು ಹಳಿದುಕೊಳ್ಳುತ್ತಾಳೆ. ಪದ್ಮಿನಿ ತನ್ನ ಪರಿಚಯವನ್ನು ನೀಡುತ್ತಾಳೆ. ಶ್ರೀನಿವಾಸನು ತನ್ನ ಪರಿಚಯವನ್ನು ತಿಳಿಸುವಾಗ ತನ್ನನ್ನು ಶಶಿ ವಂಶದವನೆಂದೂ, ಚಕ್ರಿಯೆಂದೂ ಪದ್ಮಾವಲ್ಲಭನೆಂದೂ ತನ್ನ ವಾಸ ಶೇಷಾಚಲವೆಂದೂ ಕಿರಾತರು ತನ್ನ ಸಂಗಡಿಗರೆಂದೂ ತಿಳಿಸುತ್ತಾನೆ. ತಾನು ಯಾರೆಂದು ಪದ್ಮಿನಿಯ ತಂದೆಗೆ ತಿಳಿದರೆ ತಾನೇ ನಿಂತು ಮದುವೆ ಮಾಡಿಸುವೆನೆಂದೂ, ಹಿಂದೆ ಶ್ರೀಕೃಷ್ಣನು ರುಕ್ಮಿಣಿಯನ್ನು ಅಪಹರಿಸಿದಂತೆಯೇ ತಾನೂ ಅವಳನ್ನು ಅಪಹರಿಸುವುದು ಸಾಧ್ಯವೆಂದೂ ತಿಳಿಸಲು, ಪದ್ಮಿನಿ ವೆಂಕಟೇಶ್ವರನನ್ನು ಕುರಿತು ''ನೀನು ಗುಣವಂತನಾದರೆ ನನ್ನ ತಂದೆಯನ್ನೇ ಬಂದು ಬೇಡಿಕೋ'' ಎಂಬುವುದಾಗಿ ಹೇಳಿ ಹಿಂದಿರುಗುತ್ತಾಳೆ. ಪದ್ಮಿನಿಯಿಂದ ತಿರಸ್ಕೃತನಾದ ಶ್ರೀನಿವಾಸನು ವಿರಹತಪ್ತನಾಗಿ ತನ್ನ ಸದನಕ್ಕೆ ತೆರಳಿ ನೆಲವನ್ನೇ ದಿಟ್ಟಿಸುತ್ತಾ ಬಿಸಿ ಉಸಿರನ್ನು ಬಿಡುತ್ತಾ ತಲೆಬಾಗಿ ಕೊಡೆಗಳ ತೊಲಗಿಸಿ ನುಡಿಯದೆ ಶ್ರೀನಿವಾಸ ನೆಳವಾಸಿನೊಳು ಕುಳ್ಳಿರ್ದ. ಪದ್ಮಾವತಿಯ ದಿವ್ಯಾಕೃತಿಯನು ಹೃತ್ಪದ್ಮ ಸದ್ಮದೊಳಿಂಬಿಟ್ಟು ಪದ್ಮಿನಿ ಬಾರೆಂದು ಬಯಲನಪ್ಪುವ ನಗ । ಪದ್ಮನು ಪದ್ಮದಳಾಕ್ಷ ॥ ಪರಿತಪ್ತ ಮಾನಸನಾಗಿ ವಿರಹೋದ್ರೇಕ ತಾಪದಲಿ ಬೆಂದು ಖಿನ್ನನಾಗಿ ಕಳವಳಿಪನು. ಕಾತರಿಪನು. ಈ ಕಪಟನಾಟಕ ಸೂತ್ರದಾರಿ ಚಪಲ ಮಾನಸನಾಗಿ ಮರುಗಿ ತಪಿಸುತಿರ್ದನು. ವೆಂಕಟೇಶ್ವರನ ವಿಚಿತ್ರ ನಡವಳಿಕೆಯನ್ನು ಕಂಡ ಬಕುಳ ಮಾಲಿನಿಯೆಂಬ ಅಡಿಗೆಯವಳು ತಾಯಿಯಂತೆ ಈತನನ್ನು ಸಲುಹಿದ ಪುಣ್ಯಾತ್ಮಗಿತ್ತಿ ಅವನ ದುಃಖಕ್ಕೆ ಕಾರಣವೇನೆಂದು ಕೇಳಲು ತಾನು ಬೇಟೆಗೆ ಹೋದಾಗ ಪದ್ಮಿನಿಯನ್ನು ಕಂಡು ಮೋಹಿತನಾಗಿರುವ ವಿಷಯವನ್ನು ತಿಳಿಸುತ್ತಾನೆ. ಪದ್ಮಿನಿಯ ಹಿಂದಿನ ಜನ್ಮದ ವೃತ್ತಾಂತವನ್ನು ಬಕುಲಾದೇವಿಗೆ ಶ್ರೀನಿವಾಸನು ತಿಳಿಸುತ್ತಾನೆ.

### ತ್ರೇತಾಯುಗದ ವೇದವತಿಯೇ ಪದ್ಮಿನಿ

ಮೂರನೆಯ ಸಂಧಿಯಲ್ಲಿ ತ್ರೇತಾಯುಗದ ರಾಮಾಯಣ ಕಥೆಯನ್ನು ವಿವರಿಸುತ್ತಾನೆ. ವರಾಹ ಪುರಾಣದ ಐದನೆಯ ಅಧ್ಯಾಯಯದಲ್ಲಿ ವೇದವತಿಯ ಚರಿತ್ರೆ ಸವಿಸ್ತರವಾಗಿರುತ್ತೆ. ಇದೇ ಆಧ್ಯಾತ್ಮ ರಾಮಾಯಣದಲ್ಲೂ ಉಕ್ತವಾಗಿದೆ. ಪದ್ಮಿನೀ ಪರಿಣಯದಲ್ಲಿ ಚೆನ್ನಯ್ಯ ಕವಿ ಹಿಂದೆ ತ್ರೇತಾಯುಗದಲ್ಲಿ ನಾನು ರಾವಣನನ್ನು ಸಂಹರಿಸುವ ಸಂದರ್ಭದಲ್ಲಿ ವೇದವತಿ ಎಂಬುವ ಕನ್ಯೆಯು ಲಕ್ಷ್ಮಿಗೆ (ಸೀತೆಗೆ) ಸಹಾಯಮಾಡಿದಳು. ವೇದವಿದನಾದ ವಿಪ್ರನಿಗೆ ವೇದವತಿ ಎಂಬುವ ಮಗಳಿದ್ದಳು.

ಆಕೆ ವಿಷ್ಣುವನ್ನು ತಾನು ವರಿಸುವೆನೆಂದು ತಂದೆಗೆ ತಿಳಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಹೊರಟಳು. ವೇದಾವತಿ ತಪಸ್ಸು ಮಾಡುತ್ತಿರುವ ಸ್ಥಳಕ್ಕೆ ರಾವಣನು ಆ ಮಾರ್ಗವಾಗಿ ದಿಗ್ವಿಜಯಕ್ಕೆ ಪರಿವಾರ ಸಹಿತ ಹೋಗುತ್ತಿದ್ದನು. ಈಕೆಯ ಸೌಂದರ್ಯವನ್ನು ಕಂಡು ರಾವಣನು ಮೋಹಿತನಾಗಿ ಅವಳನ್ನು ಬಲಾತ್ಕರಿಸಲು ಉದ್ಯುಕ್ತನಾದಾಗ ತನ್ನ ಕೈಯ್ಯನ್ನು ಹಿಡಿದ ರಾವಣನನ್ನು ''ಬಲುಮೆಯಿಲ್ಲದೆ ಪರಲಲನೆಯನು ಪೀಡಿಸಿದ ಈ ಪಾಪಿಯ ತಲೆ ಧರೆಗುರುಳಲಿ ಎಂದು ಶಪಿಸಿ ತಾನು ಅಗ್ನಿಕುಂಡಕ್ಕೆ ಹಾರುತ್ತಾಳೆ. ರಾವಣನ ಕುತಂತ್ರವನ್ನು ಅರಿತ ಅಗ್ನಿ ತನ್ನ ಬಳಿಯಿದ್ದ ವೇದವತಿಯನ್ನು ಸೀತೆಯ ಜಾಗದಲ್ಲಿಟ್ಟು ಸೀತೆಯನ್ನು ಸಂರಕ್ಷಿಸುತ್ತಾನೆ. ರಾಮನು ರಾವಣನನ್ನು ಗೆದ್ದ ಮೇಲೆ ರಾಮನು ಸೀತೆಗೆ ಅಗ್ನಿಪ್ರವೇಶ ಮಾಡಲು ಅಜ್ಞಾಪಿಸಿದಾಗ ಬೆಂಕಿಯನ್ನು ಹೊಕ್ಕಿದ್ದು ಮಾಯಾಸೀತೆ ವೇದವತಿ. ತರುವಾಯ ಅಗ್ನಿ ನಿಜವಾದ ಸೀತೆಯನ್ನು ರಾಮನಿಗೆ ಅರ್ಪಿಸುತ್ತಾನೆ, ರಾಮನು ಪಟ್ಟಾಭಿಷಿಕ್ತನಾಗಿರುವಾಗ ಅಗ್ನಿಯು ವೇದವತಿಯೊಡನೆ ಬಂದು ಅವಳನ್ನು ಸ್ವೀಕರಿಸುವಂತೆ ತಿಳಿಸುತ್ತಾನೆ. ಆ ಅವತಾರದಲ್ಲಿ ತಾನು ಏಕಪತ್ನೀವ್ರತನಾದ್ದರಿಂದ ''ದ್ವಾಪರಯುಗದ ಕೊನೆಯಲ್ಲಿ ತಾನು ಶ್ರೀ ವೈಕುಂಠಕ್ಕೆ ಸಮಾನವಾದ ವೆಂಕಟಾಚಲದಲ್ಲಿ ವಾಸಿಸುವಾಗ ಅವಳನ್ನು ಮದುವೆಯಾನೆಂದು'' ಅಗ್ನಿಗೆ ವಾಗ್ದಾನ ಮಾಡುತ್ತಾನೆ.



''ಇದುವರೆಗೂ ವೇದವತಿ ಸತ್ಯಲೋಕ ದಲ್ಲಿದ್ದು ಪದ್ಮಿನಿಯಾಗಿ ಆಕಾಶರಾಜನ ಕುವರಿಯಾಗಿ ಬೆಳೆಯುತ್ತಿದ್ದಾಳೆ. ತಾಯಿ ಬಕುಳಾದೇವಿ ನೀನು ನನ್ನ ಪರ ಹೋಗಿ ಪದ್ಮಿನಿಯನ್ನು ನನಗೆ ಕೊಟ್ಟು ವಿವಾಹ ಮಾಡುವಂತೆ ಆಕಾಶರಾಜನನ್ನು ಬೇಡಿಕೋ'' ಎಂಬುವುದಾಗಿ ಶ್ರೀನಿವಾಸನು ಹೇಳಿದನು. ವಕುಳಾದೇವಿ ವೆಂಕಟಗಿರಿಯ ಸ್ವರ್ಣ ಮುಖಿನದಿಯನ್ನು ದಾಟಿ ದಕ್ಷಿಣ ದಿಕ್ಕಿನಲ್ಲಿರುವ ಅರಣಿನದಿಯ ಬಳಿ ಇರುವ ಅಗಸ್ತ್ಯೇಶ್ವರನ ದೇವಾಲಯದಲ್ಲಿ ಶಿವನನ್ನು ಪೂಜಿಸಿದಾಗ ಈಶ್ವರನು ಆಕೆಯನ್ನು ತನ್ನ ದೇವಾಲಯದಲ್ಲೇ ಇರುವಂತೆ ಪ್ರೇರೇಪಿ ಸುತ್ತಾನೆ. ಈ ಕಡೆ ಪದ್ಮಾವತಿಯು ಅರಮನೆಯನ್ನು ಸೇರಿದ ಮೇಲೆ ನಡೆದ ಘಟನೆಗಳಿಂದ ವಿಚಲಿತಳಾಗಿ ನಾರದರು ತಾನು ವೆಂಕಟೇಶ್ವರನನ್ನು ಮದುವೆಯಾಗುವ ವಿಷಯನ್ನು ಜ್ಞಾಪಿಸಿಕೊಂಡು ವೆಂಕಟೇಶ್ವರನು ಹೇಳಿದ ಮಾತುಗಳನ್ನು ನೆನೆಸಿ ಆತನೇ ನಿಜವಾದ ಶ್ರೀನಿವಾಸನೆಂದು ಭಾವಿಸಿ ಅವನಲ್ಲಿ ಅನುರಕ್ತಳಾಗಿ ವಿರಹವೇದನೆಯಿಂದ ತಪ್ತಳಾಗುತ್ತಾಳೆ. ಖಿನ್ನಳಾಗಿರುವುದನ್ನು ತಂದೆತಾಯಿಗಳು ಕಂಡು ವಿದ್ವಾಂಸರನ್ನು ಜ್ಯೋತಿಷಿಗಳನ್ನು ವಿಚಾರಿಸಿದಾಗ ಪದ್ಮಾವತಿ ಪುಣ್ಯಚರಿತಳು ಅವಳು ಭಕ್ತಿಯಿಂದ ಅಗಸ್ತ್ಯೇಶ್ವರನನ್ನು ಪೂಜಿಸಿದರೆ ಒಳಿತಾಗುತ್ತದೆ ಎಂದು ಸೂಚಿಸುತ್ತಾರೆ. ಪದ್ಮಿನಿಯ ಖಿನ್ನತೆಗೆ ಪರಿಹಾರ ಬಕುಳಮಾಲಿನಿಯನ್ನು ಸಂಪರ್ಕಿಸು ವಂತೆ ಅಶರೀರವಾಣಿಯೊಂದು ತಿಳಿಸುತ್ತದೆ.

ಅಗಸ್ತ್ಯೇಶ್ವರನ ಆಲಯದಲ್ಲಿ ತಂಗಿದ್ದ ಬಕುಳಮಾಲಿನಿಯನ್ನು ಕಂಡು ಸಖಿಯರು ಆಕೆಯನ್ನು ರಾಣಿ ಹತ್ತಿರಕರೆದು ತರುತ್ತಾರೆ. ಆಕೆ ಪದ್ಮಿನೀ ವೆಂಕಟೇಶ್ವರರ ಸಂಬಂಧವನ್ನು ಅವರ ಸಂಭಾಷಣೆಯನ್ನೂ ಹೇಳಿ ಅವರಿಬ್ಬರ ವಿವಾಹ ವನ್ನು ನೆರವೇರಿಸು ವಂತೆ ಬೇಡಿಕೊಳ್ಳುತ್ತಾಳೆ.

### ಪದ್ಮಿನೀ ಕಲ್ಯಾಣ

ಆಕಾಶರಾಜ ಧರಣಿದೇವಿ ವೆಂಕಟೇಶ್ವರನು ತಮ್ಮ ಅಳಿಯನಾಗುವನೆಂದು ತಿಳಿದು ಸಂತೋಷಗೊಂಡು ಮದುವೆಗೆ ಶುಭ ಮುಹೂರ್ತವನ್ನು ನಿಶ್ಚಯಿಸಿ ವಿವಾಹಕ್ಕೆ ದಯಮಾಡಿಸಬೇಕೆಂದು ಬಕುಳಮಾಲಿನಿ ಮುಖಾಂತರ ರಾಜನು ಆಹ್ವಾನವನ್ನು ಕಳುಹಿಸುತ್ತಾನೆ. ಪದ್ಮಾವತಿಗೆ ವೆಂಕಟೇಶ್ವರನು ಹೇಳಿಕಳುಹಿಸಿದ ಸಂದೇಶ ತಿಳಿಸಿ ಅವನಿತ್ತ ಉಂಗುರವನ್ನು ಪದ್ಮಿನಿಗೆ ಬಕುಳಾದೇವಿ ನೀಡುತ್ತಾಳೆ. ಪದ್ಮಿನಿ ತನ್ನ ಮುದ್ದಿನ ರಾಜಕೀರವನ್ನು ನೆನಪಿಗೆ ಶ್ರೀನಿವಾಸನಿಗೆ ಕಳುಹಿಸಿ ತನ್ನನ್ನು ಬೇಗ ಪರಿಗ್ರಹಿಸಬೇಕೆಂದು ಪ್ರೇಮ ಸಂದೇಶವನ್ನು ಕಳುಹಿಸುತ್ತಾಳೆ. ಆರನೆಯ ಸಂಧಿ ಹರಿಶುಕರ ಸಂಭಾಷಣೆ. ವಿವಾಹ ಪ್ರಯಾಣವರ್ಣನೆಗಳು. ವೆಂಕಟೇಶ್ವರನು ಶಿವ ಬ್ರಹ್ಮ ದಿಕ್ಪಾಲಕರು ಸನಕಾದಿ ಯೋಗಿಗಳಿಂದಲೂ ವಸಿಷ್ಠಾದಿ ಮುನಿಗಳಿಂದಲೂ ಕೂಡಿ ಆಕಾಶರಾಜನ ಪುರಕ್ಕೆ ತೆರಳಿದರು. ಮಯವಿಶ್ವಕರ್ಮರು ವಿವಾಹಮಂಟಪವನ್ನು ರಚಿಸುತ್ತಾರೆ. ತೃತೀಯ ಅಶ್ವಾಸದಲ್ಲಿ ಪ್ರಥಮ ಸಂಧಿಯಲ್ಲಿ 232 ಪದ್ಯಗಳಲ್ಲಿ ಶ್ರೀ ವೆಂಕಟೇಶ್ವರನ ಪದ್ಮಾವತಿಯರ ವಿಸ್ತಾರವಾಗಿ ವಿವಾಹವನ್ನು ಕವಿ ವರ್ಣಿಸಿದ್ದಾನೆ. ಸಾಕ್ಷಾತ್ ಗಿರಿಜೆಯೇ ಪದ್ಮಿನಿಗೆ ಮಂಗಳಸೂತ್ರವನ್ನು ಕಟ್ಟುತ್ತಾಳೆ. ಅರುಂಧತಿ ಅನುಸೂಯಾದಿಗಳ ಶೋಭನ ಗೀತೆ ಹಾಡುತ್ತಾರೆ. ಕವಿ ಮದುವೆಯನ್ನು ವರ್ಣಿಸುವಾಗ-

ಭೋರೆಂಬ ವಾದ್ಯಧ್ವನಿ ಮೊಳಗಲು
ನಾರಿಯರ್ ಗೀತವ ಪಾಡೆ
ಧಾರುಣೀಸುರರ ಸುಸ್ವಸ್ತಿ ವಾಚನೆ ಬೃಂ
ದಾರಕ ಜಯರವಮೆಸೆಯೆ

ಪಾಣಿಗ್ರಹಣದ ಸಮಯದಲ್ಲಿ ಚಕ್ರ ಪಾಣಿಯ ಸಂಸ್ಪರುಷದಿಂದ ಪುಳಕಿತಳಾಗಿ ಪರವಶಳಾದಳು. ಪಲ್ಲವ ಪಾಣಿಯ ಪದ್ಮಾವತಿಯ ಲಾಜಾಹೋಮ, ಸಪ್ತಪದಿ ಉರಟಣೆ, ಅರಿಸಿನ ಹಚ್ಚುವ ಶಾಸ್ತ್ರ ಓಕುಳಿಯಾಡುವ ಸಂಭ್ರಮ ಅದ್ಭುತ ವರ್ಣನೆ. ಸುರರು ನರರು ಎಂಬುವ ಭೇದವಿಲ್ಲದೆ ಮರೆತು ವಸಂತೋತ್ಸವವನ್ನು ಆಚರಿಸುತ್ತಾರೆ. ಪದ್ಮಿನಿಯ ಪ್ರಿಯಸಖಿ ಆದ ಕುಸುಮ ಮಂಜರಿ ವೆಂಕಟೇಶ್ವರನಲ್ಲಿ ಅನುರಕ್ತಳಾಗುತ್ತಾಳೆ. ಆಕೆ ವಿವೇಕಿಯೆಂಬ ಮಂತ್ರಿಮಗಳು. ಇದನ್ನು ಅರಿತ ವೆಂಕಟೇಶ್ವರನು ಆಕೆಯನ್ನೂ ಮದುವೆ ಯಾಗುತ್ತಾನೆ. ವೆಂಕಟೇಶ್ವರನು ಕೆಲವು ಕಾಲ ನಾರಾಯಣ ಪುರದಲ್ಲಿ ಇದ್ದು ಪದ್ಮಿನಿ ಕುಸುಮ ಮಂಜರಿಯೊಡನೆ ವೆಂಕಟಗಿರಿಗೆ ಹಿಂದಿರು ಗುತ್ತಾನೆ. ಈ ಕಾವ್ಯ ಶೃಂಗಾರಮಯ ಕಾವ್ಯ. ಕೊನೆಯ ನಾಲ್ಕನೆಯ ಸಂಧಿಯಲ್ಲಿ ವೆಂಕಟೇಶ್ವರನು ಪದ್ಮಾವತಿಗೆ ಭೂಗೋಳದ ವೆಂಕಟಾಚಲ ಮಾಹಾತ್ಮೆ ಹೇಳುತ್ತಾನೆ.

ಕೊನೆಯಲ್ಲಿ ಕಾವ್ಯವನ್ನು ಮುಗಿಸುವ ಮುನ್ನ-
ಇದರೊಳು ಮಂತ್ರರಹಸ್ಯ ಸೂಚನೆಯಿ
ರ್ಪುದು ಪ್ರತ್ಯಧ್ಯಾಯದೊಳು
ಇದು ಹರಿಭಕ್ತಿಯೀವುದು ಸರ್ವಸಂಪ
ತ್ತದವ ಮಂಗಳವನಿತ್ತಪುದು
ಶ್ರೀ ಚೆನ್ನಕೇಶವಾತ್ಮಕ ಶ್ರೀಧರ ರಜ
ನೀಚರನಿಚಯ ಸಂಹಾರ
ರೋಚಿಸ್ಸ್ವರೂಪ ಖಗೇಂದ್ರವಾಹನ ವೆಂಕ
ಟಾಚಲ ನಾಯಕ ಜಯತು

ಕೊನೆಯ ಮೂರು ಪದ್ಯಗಳ ವಾರ್ಧಕ ಷಟ್ಪದಿಯ ಫಲಶ್ರುತಿ. ಆಸೂರಿ ರಾಮಸ್ವಾಮಯ್ಯಂಗಾರ್‌ರವರು 1963 ರಲ್ಲಿ ಶ್ರೀನಿವಾಸ ಲೀಲಾವಿಲಾಸಂ ಎಂಬುವ ಪದ್ಯರೂಪದಲ್ಲಿ ಶ್ರೀನಿವಾಸರ ಕಲ್ಯಾಣವನ್ನು ಬರೆದಿದ್ದಾರೆ. ಶ್ರೀ ಶ್ರೀನಿವಾಸನ ವೈಭವವನ್ನು ಋಷಿಗಳು ಪುರಾಣಕಾರರು ಹರಿಭಕ್ತರು. ಸಂತರು ದ್ರಾವಿಡವೇದಗಳಲ್ಲಿ ಆಳ್ವಾರುಗಳೂ ಹಾಡಿದ್ದಾರೆ. ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು - ಶ್ರೀನಿವಾಸನನ್ನು ಕುರಿತು ಹಾಡಿರುವಂತಹ ಹಾಡುಗಳು ಅಪಾರ. ಅನ್ನಮಾಚಾರ್ಯರ ಕೃತಿಗಳನ್ನು ಸರಿಗಟ್ಟುವ ಕೃತಿಗಳು ಇನ್ನೂ ಬಂದಿಲ್ಲ. ಶ್ರೀ ವೆಂಕಟೇಶ್ವರನ ವೈಭವ ಶ್ರೀ ವೆಂಕಟಗಿರಿಯ ಮಹಾತ್ಮ್ಯೆಗಳನ್ನು ಪೂರ್ಣ ವರ್ಣಿಸಲು ಸುರನರರು ಯೋಗಿಗಳು ಯಾರಿಗೂಸಾಧ್ಯವಾಗುತ್ತಿಲ್ಲ. ★

## ತಿರುಮಲೆಯಲ್ಲಿ ವಸಂತೋತ್ಸವ

ತಿರುಮಲೆಯ ಆಲಯದ ಹಿಂದಿರುವ ಸ್ವಾಮಿಯ ವಸಂತೋತ್ಸವ ಮಂಟಪದಲ್ಲಿ 24-4-2002 ರಿಂದ ಮೂರುದಿನಗಳ ಕಾಲ ಘನವಾಗಿ ಶ್ರೀ ವೆಂಕಟೇಶ್ವರಸ್ವಾಮಿಯ ವಾರ್ಷಿಕ ವಸಂತೋತ್ಸವ ನಡೆದು ಯಶಸ್ವಿಯಾಯಿತು.

ಮೊದಲನೆಯದಿನ ಬುಧವಾರ ಶ್ರೀ ಮಲೆಯಪ್ಪಸ್ವಾಮಿಯನ್ನು ಉಭಯ ನಾಯಕಿಯರೊಡನೆ ಮೆರವಣಿಗೆಯಲ್ಲಿ ವಸಂತ ಮಂಟಪಕ್ಕೆ ಕರೆತರಲಾಯಿತು. ಅಲ್ಲಿ ಮಧ್ಯಾಹ್ನ ಸಡಲಿಂಪು ಕಾರ್ಯಕ್ರಮವಿದ್ದಿತು. ನಂತರ ವಿಧಿಯುಕ್ತ ತಿರುಮಂಜನವು ಮಧ್ಯಾಹ್ನ ಎರಡರಿಂದ ಮೂರು ಗಂಟೆಯ ವರೆಗೆ ನಡೆದು ನಂತರ ಅಲಂಕಾರವಾಯಿತು. ಆಗಮೋಕ್ತವಾಗಿ ಆಸ್ಥಾನವನ್ನು ನಿರ್ವಹಿಸಲಾಯಿತು. ವಸಂತೋತ್ಸವ ಪೂರ್ತಿಯಾದ ಮೇಲೆ ಪುನಃ ಸ್ವಾಮಿಯನ್ನೂ ಅಮ್ಮನವರನ್ನೂ ಮೆರವಣಿಗೆಯಲ್ಲಿ ಆಲಯಕ್ಕೆ ಕರೆತರಲಾಯಿತು. ಆಲಯದ ಒಳಗೆ ಪ್ರದಕ್ಷಿಣಾಕಾರವಾಗಿ ಮೆರವಣಿಗೆಯಾಗಿ ಹುಂಡಿಯ ಎದುರಿನ ರಾಮಾನುಜರ ಸನ್ನಿಧಿಯಲ್ಲಿನ ಮುಖ ಮಂಟಪದಲ್ಲಿ ಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಬಿಜಯಗೊಳಿಸಿ ಆಸ್ಥಾನವನ್ನು - ನಿತ್ಯೋತ್ಸವವನ್ನು - ನಿರ್ವಹಿಸಲಾಯಿತು. ಅನಂತರ ತಿರುಮಾಮಣಿ ಮಂಟಪದಲ್ಲಿ ಬಂಗಾರದ ಬಾಗಿಲ ಬಳಿ ಸಡಲಿಂಪು ಕಾರ್ಯಕ್ರಮ ನಡೆದು ಮೊದಲದಿನದ ಉತ್ಸವ ಪೂರ್ಣವಾಯಿತು.

ಮಾರನೆಯ ದಿನ ಗುರುವಾರ ಬೆಳಗ್ಗೆ ಒಂಬತ್ತು ಗಂಟೆಗೆ ಸ್ವಾಮಿಗೆ ಬಂಗಾರದ ರಥ. ಉಭಯನಾಯಕೀಸಮೇತ ಮಲೆಯಪ್ಪಸ್ವಾಮಿ ಬಂಗಾರದ ರಥದಲ್ಲಿ ಭಕ್ತರನ್ನು ಆನಂದಗೊಳಿಸುತ್ತ ವಸಂತ ಮಂಟಪಕ್ಕೆ ಆಗಮಿಸಿದರು. ಅಲ್ಲಿ ವಸಂತೋತ್ಸವ ಕಾರ್ಯಕ್ರಮ ಹಿಂದಿನ ದಿನದಂತೆಯೇ ಯಥಾವಿಧಿಯಾಗಿ ನಡೆಯಿತು. ಸ್ವಾಮಿಯನ್ನು ಅಸಂಖ್ಯಾತ ಭಕ್ತರು ದರ್ಶಿಸಿ ಅನುಗ್ರಹ ಪಡೆದರು.

ಮೂರನೆಯ ದಿನ ವಸಂತೋತ್ಸವದ ಮುಕ್ತಾಯ. ಅಂದು ಸ್ವಾಮಿ ಆಲಯದ ಗರ್ಭಗುಡಿಯಲ್ಲಿರುವ ಶ್ರೀರಾಮಚಂದ್ರಸ್ವಾಮಿ ಲಕ್ಷ್ಮಣ ಸೀತಾ ಹನುಮತ್ಸಮೇತರಾಗಿಯೂ ಶ್ರೀಕೃಷ್ಣನು ರುಕ್ಮಿಣೀ ಸಹಿತನಾಗಿಯೂ ಮೆರವಣಿಗೆಯಲ್ಲಿ ವಸಂತಮಂಟಪಕ್ಕೆ ಬಂದರು. ಸಡಲಿಂಪು ಕಾರ್ಯಕ್ರಮ ಆದಮೇಲೆ ಆಗಮೋಕ್ತ ಸ್ನಪನ ತಿರುಮಂಜನವಾಯಿತು.

## ವಾರ್ತಾ ಲಹರಿ

ವಿವಿಧ ಸುಗಂಧ ದ್ರವ್ಯಗಳಿಂದ ಸ್ವಾಮಿಯನ್ನೂ ಅಮ್ಮನವರನ್ನೂ ಅಭಿಷೇಕ ಮಾಡಿದ ನಂತರ ಅಲಂಕಾರ ಸಮರ್ಪಣೆಯಾಗಿ ಓಲಗವನ್ನು ನಿರ್ವಹಿಸಲಾಯಿತು. ನಂತರ ತೇರುಬೀದಿಗಳಲ್ಲಿ ಮೆರವಣಿಗೆಯಲ್ಲಿ ಉತ್ಸವರನ್ನೂ ಇತರರನ್ನೂ ಆಲಯಕ್ಕೆ ಕರೆತರಲಾಯಿತು.

ಮೊದಲೆರಡು ದಿನಗಳ ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಆಲಯ ಡೆ.ಇ.ಓ. ಶ್ರೀ ಕೃಷ್ಣಾರೆಡ್ಡಿ ಆಲಯ ಪೇಷ್ಕಾರ್ ಶ್ರೀ ಡಿ. ಎಸ್. ಪ್ರಭಾಕರರಾವ್ ಮುಂತಾದ ಹಿರಿಯರು ಪಾಲುಗೊಂಡು ಯಾತ್ರಿಕಾನುಕೂಲತೆಯನ್ನೂ ಉತ್ಸವವಿವರಗಳನ್ನೂ ಪರಿಶೀಲಿಸುತ್ತ ಮಾರ್ಗದರ್ಶನ ನೀಡಿದರು. ಮೂರನೆಯ ದಿನದ ಮುಕ್ತಾಯ ಸಮಾರಂಭದಲ್ಲಿ ಆಂಧ್ರಪ್ರದೇಶದ ಶಾಸನ ಸಭಾಧ್ಯಕ್ಷರಾದ ಶ್ರೀಮತಿ ಪ್ರತಿಭಾ ಭಾರತಿ ಅವರ ಉಪಸ್ಥಿತಿಯಿದ್ದಿತು.

## ತಿರುಮಲೆಯಲ್ಲಿ ಆಂಧ್ರ ಮುಖ್ಯಮಂತ್ರಿ

### ಹಲವು ಕಾರ್ಯಕ್ರಮಗಳ ಉದ್ಘಾಟನೆ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ಏಪ್ರಿಲ್ 27 ರಂದು ತಿರುಮಲೆಗೆ ಆಗಮಿಸಿ ಹಲವಾರು ತಿ.ತಿ.ದೇ. ಕಾರ್ಯಕ್ರಮಗಳನ್ನೂ, ಭವನ, ಪುಸ್ತಕಗಳ ಬಿಡುಗಡೆಯನ್ನೂ ನಡೆಸಿಕೊಟ್ಟರು.

ಶನಿವಾರ ಸಂಜೆ ತಿರುಮಲೆಗೆ ಆಗಮಿಸಿದ ಮುಖ್ಯಮಂತ್ರಿ ಮಹೋದಯರು ತಿ.ತಿ.ದೇ. ನಿರ್ಮಾಣಗಳಲ್ಲಿ ಹಲವನ್ನು ಉದ್ಘಾಟಿಸಿದರು.

ತಿರುಪತಿ - ಕರಕಂಬಾಡಿ ನಾಲ್ಕು ವಾಹನ ಸಂಚಾರದ ರಸ್ತೆಯನ್ನು 12.82 ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಂಡಿದ್ದು ಈ ರಸ್ತೆಯ ಉದ್ದ ಸರಿಸುಮಾರು 10 ಕಿಲೋ ಮೀಟರುಗಳಾಗುತ್ತದೆ. ತಿರುಪತಿ - ಕರಕಂಬಾಡಿ ರಸ್ತೆಯ ಆರಂಭದಲ್ಲಿ ಈ ಯೋಜನೆಯ ಶಿಲಾಫಲಕವನ್ನು ಮುಖ್ಯಮಂತ್ರಿಗಳು ಆವಿಷ್ಕರಿಸುತ್ತ ಕೆಲಸಗಳೆಲ್ಲ ಅತಿ ಶೀಘ್ರವಾಗಿ ನಡೆಯುವಂತೆ ನೋಡಿಕೊಳ್ಳಬೇಕು ಎಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರಿಗೆ ತಿಳಿಸಿದರು. ಕರಕಂಬಾಡಿಯಲ್ಲಿ 250 ಎಕರೆ ಪ್ರದೇಶದಲ್ಲಿನ 2500 ಸೈಟುಗಳನ್ನು ತಿ.ತಿ.ದೇ. ಸಿಬ್ಬಂದಿಗೆ ನೀಡುವ ಯೋಜನೆಯ ವಿವರಗಳನ್ನು ಕೇಳಿ ತಿಳಿದ ಮುಖ್ಯಮಂತ್ರಿಗಳು ಅಲ್ಲಿನ ಶಾಲೆ, ಆಸ್ಪತ್ರೆ, ಬೀದಿದೀಪ, ಆಟದ ಮೈದಾನ, ಉದ್ಯಾನವನ, ರಸ್ತೆಸೌಲಭ್ಯಗಳಿಗೆಲ್ಲ ಆದ್ಯತೆಯನ್ನು ನೀಡಿ ನಿರ್ಮಾಣಗೊಳಿಸಬೇಕೆಂದೂ ಹಿತನುಡಿದನು.

ಅಲಿಪಿರಿಯ ಅತಿಥಿಗೃಹದ ಬಳಿ ತಿ.ತಿ.ದೇ.ಗಳು ನೂತನವಾಗಿ 1.75 ಕೋಟಿರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿರುವ ಭೂದೇವಿ ಯಾತ್ರಿಕ ಸೌಲಭ್ಯ ಸಮುದಾಯ ಭವನದ ಉದ್ಘಾಟನೆಯನ್ನು ಮುಖ್ಯಮಂತ್ರಿಗಳು ನೆರವೇರಿಸಿಕೊಟ್ಟರು. ಸ್ವಾಗತದ ಅಂಗಳ, ವಿಶ್ರಾಂತಿ ಮಂಟಪ, ಕ್ಯಾಂಟೀನ್, ಶೌಚಗೃಹ ಮೊದಲಾದ ಎಲ್ಲಸೌಲಭ್ಯಗಳಿರುವ ಈ ಯಾತ್ರಿಕ ಸಮುದಾಯ ಭವನದಲ್ಲಿ ಒಟ್ಟಿಗೆ 2500 ಮಂದಿ ವಿಶ್ರಾಂತಿ ಪಡೆಯಬಹುದಾಗಿದೆ.

ಸಂದರ್ಶಿಸಿ ಆನಂದಿಸಿ



# ಶ್ರೀ ವೇಣುಗೋಪಾಲಸ್ವಾಮಿ ದೇವಾಲಯ

## ಕಾರ್ವೇಟಿನಗರ.

# ವಾರ್ಷಿಕ ಬ್ರಹ್ಮೋತ್ಸವಗಳು

## 1-6-2002 ರಿಂದ 10-6-2002

| | | |
|---|---|---|
| 1-6-2002 | ಶನಿವಾರ | ಅಂಕುರಾರ್ಪಣೆ. |
| 2-6-2002 | ಭಾನುವಾರ | ಧ್ವಜಾರೋಹಣ. |
| 6-6-2002 | ಗುರುವಾರ | ಗರುಡವಾಹನ. |
| 9-6-2002 | ಭಾನುವಾರ | ರಥೋತ್ಸವ. |
| 10-6-2002 | ಸೋಮವಾರ | ಧ್ವಜಾವರೋಹಣ. |

**ಸೂಚನೆ :** ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳಿರುತ್ತವೆ. ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಕಾರ್ವೇಟಿನಗರ ಚಿತ್ತೂರು - ಪುತ್ತೂರು ರಸ್ತೆಯಲ್ಲಿದೆ. ತಿರುಪತಿಯಿಂದ 45 ಕಿ.ಮೀ. ದೂರ ಬಸ್ ಸೌಕರ್ಯವಿದೆ.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ ಆನಂದಿಸಿ

# ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯ

## ಅಪ್ಪಲಾಯಗುಂಟ.

# ವಾರ್ಷಿಕ ಬ್ರಹ್ಮೋತ್ಸವಗಳು

## 19-6-2002 ರಿಂದ 28-6-2002

| | | |
|---|---|---|
| 19-6-2002 | ಬುಧವಾರ | ಅಂಕುರಾರ್ಪಣೆ. |
| 20-6-2002 | ಗುರುವಾರ | ಧ್ವಜಾರೋಹಣ. |
| 24-6-2002 | ಸೋಮವಾರ | ಗರುಡವಾಹನ. |
| 27-6-2002 | ಗುರುವಾರ | ರಥೋತ್ಸವ. |
| 28-6-2002 | ಶುಕ್ರವಾರ | ಧ್ವಜಾವರೋಹಣ. |

**ಸೂಚನೆ :** ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳಿರುತ್ತವೆ. ಸಾಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಅಪ್ಪಲಾಯಗುಂಟವನ್ನು ಅಲಮೇಲು ಮಂಗಾಪುರದಿಂದಲೂ, ವಡಮಾಲಪೇಟೆಯಿಂದಲೂ ತಲುಪಬಹುದು. ತಿರುಪತಿಯಿಂದ 25 ಕಿ.ಮೀ. ದೂರ. ಬಸ್ ಸೌಕರ್ಯವಿದೆ.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.

ತಿರುಪತಿಯ ಸ್ವಿಮ್ಸ್ ಆಸ್ಪತ್ರೆಯಲ್ಲಿನ ಎಸ್.ವಿ. ಪ್ರಾಣದಾನ ಟ್ರಸ್ಟ್‌ನ ಆರಂಭೋತ್ಸವವನ್ನು ಮುಖ್ಯಮಂತ್ರಿಗಳು ನೆರವೇರಿಸಿಕೊಟ್ಟರು. ಈ ಬಗ್ಗೆ ಮಾತನಾಡುತ್ತ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳಾದ ಡಾ|| ಪಿ. ಕೃಷ್ಣಯ್ಯನವರು ಬರುವ ಐದು ವರ್ಷಗಳಲ್ಲಿ ಈ ಟ್ರಸ್ಟ್‌ಗೆ ನೂರುಕೋಟಿ ರೂಪಾಯಿಗಳ ನಿಧಿ ಸಂಗ್ರಹಿಸುವ ಯೋಜನೆಯಿದೆಯೆಂದೂ ಅದರ ಠೇವಣಿ ಯಿಂದ ಬರುವಬಡ್ಡಿಯನ್ನು ದೀನ ದರಿದ್ರರ ಪ್ರಾಣ ರಕ್ಷಣೆಯಲ್ಲಿ ಬಳಸಲಾಗುವುದೆಂದೂ ವಿವರಿಸಿದರು. ಈ ಬಗ್ಗೆ ಈಗಾಗಲೇ ಒಂದು ಕೋಟಿ ರೂಪಾಯಿಗಳನ್ನು ಶ್ರೀ ಆದಿ ಕೇಶವುಲುನಾಯುಡು ಅವರು ನೀಡಿದ್ದಾರೆಂದೂ ತಿಳಿಸಿದರು. ತಿರುಪತಿ ಎಂ.ಎಲ್.ಎ. ಶ್ರೀ ಚದಲವಾಡ ಕೃಷ್ಣಮೂರ್ತಿ ಅವರ ಪತ್ನಿ ಶ್ರೀಮತಿ ಸುಚರಿತ ಅವರು ಪ್ರಾಣದಾನ ಟ್ರಸ್ಟ್‌ಗೆ ಐದು ಲಕ್ಷ ರೂಪಾಯಿಗಳ ವಂತಿಗೆಯನ್ನು ಮುಖ್ಯಮಂತ್ರಿಗಳಿಗೆ ನೀಡಿದರು.

ತತ್ಸಂದರ್ಭದಲ್ಲಿ ಸ್ವಿಮ್ಸ್ ಏರ್ಪಾಡು ಮಾಡಿದ್ದ ನೆನಪಿನ ಸಂಚಿಕೆಯನ್ನು ಮುಖ್ಯಮಂತ್ರಿಗಳು ಬಿಡುಗಡೆ ಮಾಡಿದರು.

ತಿರುಮಲೆಯ ಕುಡಿಯುವ ನೀರಿನ ಅಗತ್ಯಗಳನ್ನು ತೀರಿಸಲೆಂದು 14 ಕೋಟಿ ರೂಪಾಯಿಗಳ ವೆಚ್ಚದಲ್ಲಿ ತಿ.ತಿ.ದೇ. ನಿರ್ಮಿಸಿದ ಆಕಾಶಗಂಗ ಅಣೆಕಟ್ಟೆಯ ರಿಸರ್ವಾಯರ್ ಅನ್ನು ಅಲ್ಲಿನ ಶಿಲಾಫಲಕದ ಆವಿಷ್ಕರಣದಿಂದ ಮುಖ್ಯಮಂತ್ರಿಗಳು ಆರಂಭಿಸಿದರು. ಸುಮಾರು 10.15 ಎಂ. ಸಿ. ಎಫ್. ಟಿ. ಸಾಮರ್ಥ್ಯದ 30 ಮೀಟರ್ ಎತ್ತರ 170 ಮೀಟರ್ ಅಗಲದ ರಿಸರ್ವಾಯರ್‌ನಿಂದಾಗಿ ಮಳೆ ಸರಿಯಾಗಿ ಬಂದಲ್ಲಿ ತಿರುಮಲೆಗೆ ಮೂರು ತಿಂಗಳಿಗೆ ಸಾಕಾಗುವಷ್ಟು ನೀರು ಇಲ್ಲಿ ಸಂಗ್ರಹ ಮಾಡಬಹುದಾಗಿದೆ. ಭಕ್ತರಿಗೆ ಇಬ್ಬಂದಿ, ಕಷ್ಟ ಉಂಟಾಗದಂತೆ ಅವರಿಗೆ ನೀರಿನ ಸರಬರಾಜು ನಿಲ್ಲದೆ ನಡೆಯಬೇಕು ಎಂದು ಮುಖ್ಯಮಂತ್ರಿ ನುಡಿದರು.



ಈಚೆಗೆ ಭಾರತದ ಗೃಹಮಂತ್ರಿ ಶ್ರೀ ಲಾಲಕೃಷ್ಣ ಅದ್ವಾನಿ ಅವರು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಅವರೊಡನೆ ಆಂಧ್ರಪ್ರದೇಶದವರೇ ಆದ ಭಾರತ ಸರ್ಕಾರದ ಸಚಿವರಿಬ್ಬರು - ಶ್ರೀ ಭಂಡಾರು ದತ್ತಾತ್ರೇಯ ಹಾಗೂ ಡಾ|| ಸಿಎಚ್. ವಿದ್ಯಾಸಾಗರರಾವ್ ಅವರುಗಳೂ ಇದ್ದರು. ಚಿತ್ರದಲ್ಲಿ ದರ್ಶನಾನಂತರ ಗೃಹಮಂತ್ರಿಗಳಿಗೆ ರಂಗನಾಯಕ ಮಂಟಪದಲ್ಲಿ ಸ್ವಾಮಿ ಪ್ರಸಾದಗಳನ್ನು ನೀಡುತ್ತಿರುವ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರನ್ನು ಕಾಣಬಹುದು.

ತಿರುಮಲೆಯ ಸಪ್ತಗಿರಿ ಸತ್ರಗಳ ಆವರಣದಲ್ಲಿ ಭಕ್ತರ ಸೌಕರ್ಯಾರ್ಥ 2.22 ಕೋಟಿರೂಪಾಯಿಗಳ ಅಂದಾಜಿನಲ್ಲಿ ಕಟ್ಟಲಾದ ಸ್ವರ್ಣಮುಖಿ ಬ್ಲಾಕ್ ಅನ್ನು ಮುಖ್ಯಮಂತ್ರಿಗಳ ಉದ್ಘಾಟಿಸಿದರು. ಈ ವರೆಗೆ ಇಲ್ಲಿ 703 ಕೊಠಡಿಗಳ ನಿರ್ಮಾಣವಾಗಿದೆ. ಈಗ 37 ಕೊಠಡಿಗಳ ಹೊಸ ವಿಭಾಗ ಈ ಸತ್ರಗಳಲ್ಲಿ ಸೇರಿದಂತಾಗಿದೆ. ಈ ವಿಭಾಗದಲ್ಲಿ ಸ್ವಾಗತ, ಎಸ್.ಟಿ.ಡಿ. ಬೂತ್‌ಗಳು, ಪುಸ್ತಕ ವಿಕ್ರಯಕೇಂದ್ರ, ಭೋಜನ ಸಮುದಾಯ ಅಡಿಗೆ ಶಾಲೆಗಳೂ ಸೇರಿವೆ. ಈ ವಿಭಾಗದ ಡಿಸೈನ್ ಚೆನ್ನಾಗಿದೆಯೆಂದು ಮುಖ್ಯಮಂತ್ರಿಗಳು ಮೆಚ್ಚಿಕೊಂಡರು.

ಶನಿವಾರ ರಾತ್ರಿ ತಿರುಮಲೆಯನ್ನು ಸೇರಿದ ಮುಖ್ಯಮಂತ್ರಿ ಶ್ರೀ ಚಂದ್ರಬಾಬುನಾಯುಡು ಅವರು ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು. ತಿ.ತಿ.ದೇ. ಇ.ಓ. ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಆಲಯ ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀಕೃಷ್ಣಾರೆಡ್ಡಿ ಮೊದ ಲಾದವರು ಮುಖ್ಯಮಂತ್ರಿಗಳಿಗೆ ಸ್ವಾಗತ ಕೋರಿದರು. ಸ್ವಾಮಿದರ್ಶನದ ತರುವಾಯ ರಂಗನಾಯಕ ಮಂಟಪದಲ್ಲಿ ವೇದಪಂಡಿತರು ಮುಖ್ಯಮಂತ್ರಿಗಳಿಗೆ ವೇದಾಶೀರ್ವಾದ ನೀಡಿದರು. ದೇವಾದಾಯ ಶಾಖಾಮಂತ್ರಿ ಶ್ರೀ ದಂಡು ಶಿವರಾಮರಾಜು ಅವರು ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು.

ತಿರುಪತಿಯ ಸ್ವಿಮ್ಸ್ ಆಸ್ಪತ್ರೆಯಲ್ಲಿ ಶನಿವಾರ ಯಾತ್ರಿಕರ ಸೌಕರ್ಯಾರ್ಥ ತಿ. ತಿ. ದೇವಸ್ಥಾನಗಳ ಪ್ರಯತ್ನಗಳನ್ನೂ ಪ್ರಾಯೋಜನೆ ಗಳನ್ನೂ ವಿವರಿಸುವ ಸಿ.ಡಿ. ಯನ್ನು ಮುಖ್ಯಮಂತ್ರಿಗಳಿಗೆ ಕಿರುತೆರೆಯ ಮೇಲೆ ಪ್ರತಿಮೀಕರಿಸಿ ತೋರಿಸಲಾಯಿತು. ಆಂಧ್ರಪ್ರದೇಶ ಸರ್ಕಾರದ ಮೀಡಿಯಾ ಸಲಹೆಗಾರರಾದ ರಾಘವೇಂದ್ರರಾಯುರು ತಯಾರಿಸಿದ ಈ ಸಿ.ಡಿ.ಯಲ್ಲಿ ಶ್ರೀ ವೆಂಕಟೇಶ್ವರ



## ಯಾತ್ರಿಕ ಭಕ್ತರಲ್ಲಿ.....

# ವಿನಂತಿ

## "ಡಯಲ್ - ಯುವರ್ ಇ.ಓ."

ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

***ದೂರವಾಣಿ ಸಂಖ್ಯೆ - 08574-77261.***

**ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು**

**ತಮ್ಮ ಸುಲಭತರ ಯಾತ್ರೆ ಕೈಗೂಡಲು**

**ದಯವಿಟ್ಟು ಮಾತನಾಡಿ.**

ನಿತ್ಯ ಅನ್ನದಾನ ಯೋಜನೆ, ಮೂಗ, ಕಿವುಡ ಅಂಧರ ಶಾಲೆಯ ವಿವರಗಳು, ಪೋಲಿಯೋ ರೋಗಿಗಳಿಗೆ ಬರ್ಡ್ ಆಸ್ಪತ್ರೆಯ ಸೇವೆಗಳು, ಸ್ವಿಮ್ಸ್‌ನಲ್ಲಿ ನಡೆಸಲಾಗುತ್ತಿರುವ ಆಧುನಿಕ ವೈದ್ಯಕೀಯ ಸದುಪಾಯ ಸೌಲಭ್ಯಗಳ ವಿವರಗಳೂ ಇದ್ದು ಒಂದು ರೀತಿಯಲ್ಲಿ ತಿರುಮಲೆಯ ಆದಾಯದ ವೆಚ್ಚಗಳ ವಿವರ ಪತ್ರದಂತೆಯೂ, ಮಾನವಸೇವೆಯ ಆದರ್ಶದಂತೆಯೂ ರೂಪುಗೊಂಡಿದೆ ಎಂದು ಹೇಳಲಾಗಿದೆ.

(ಉದ್ಘಾಟನಾ ಆರಂಭೋತ್ಸವ ಚಿತ್ರಗಳನ್ನು ವರ್ಣದಲ್ಲಿ ಮಧ್ಯವಿಸ್ತೃತಿಯ ಪುಟಗಳಲ್ಲಿ ನೋಡಬಹುದು.)

### ತಿರುಮಲೆಯಲ್ಲಿ ಕರ್ನಾಟಕದ ಮುಖ್ಯಮಂತ್ರಿ

ಏಪ್ರಿಲ್ 30 ನೇ ತಾರೀಖು ಸಂಜೆ ತಿರುಮಲೆಯನ್ನು ಸೇರಿದ ಕರ್ನಾಟಕದ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಅಂದು ರಾತ್ರಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಅವರನ್ನು ಆಲಯದ ಡೆ.ಇ.ಓ. ಶ್ರೀ ಕೃಷ್ಣಾರೆಡ್ಡಿ ಅವರು ಸ್ವಾಗತಿಸಿದರು.

ಬುಧವಾರ ಬೆಳಗ್ಗೆ ನಡೆಯುವಂತಹ ಸಹಸ್ರ ಕಳಶಾಭಿಷೇಕ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಗಳು ಪಾಲುಗೊಂಡರು. ಅಂದು ಅವರ ಹುಟ್ಟಿದ ಹಬ್ಬದ ದಿನವಾಗಿ ಕುಟುಂಬ ಸಹಿತರಾಗಿ ಅವರು ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಲು ಬಂದಿದ್ದರು. ಅವರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದವನ್ನು ಪ್ರಸಾದಗಳನ್ನೂ ನೀಡಲಾಯಿತು.

ಸ್ವಾಮಿಯ ದರ್ಶನದ ನಂತರ ಮುಖ್ಯಮಂತ್ರಿಗಳು ತಿರುಮಲೆಯ ವೈಖಾನಸ ಆಶ್ರಮದಲ್ಲಿ ನಡೆದ ಯಜ್ಞದಲ್ಲಿ ಪಾಲುಗೊಂಡರು.

### ಸ್ವಾಮಿ ಸೇವೆಯಲ್ಲಿ ಹರ್ಯಾಣ ಮುಖ್ಯಮಂತ್ರಿ

ಮಂಗಳವಾರ ತಿರುಮಲೆಯನ್ನು ಸೇರಿದ ಹರಿಯಾಣದ ಮುಖ್ಯ ಮಂತ್ರಿ ಶ್ರೀ ಓಂ ಪ್ರಕಾಶ ಚೌಥಾಲ ಅವರು ಸ್ವಾಮಿಯನ್ನು ಬುಧವಾರದ ದಿನಬೆಳಗ್ಗೆ ಸಂದರ್ಶಿಸಿ ಆರಾಧಿಸಿದರು. ಸ್ವಾಮಿಯ ಸನ್ನಿಧಿಯಲ್ಲಿ ಅವರಿಗೆ ಶ್ರೀ ವೆಂಕಟೇಶ್ವರ ವೈಭವವನ್ನು ಹಿಂದಿಯಲ್ಲಿ ವಿವರಿಸಲಾಯಿತು. ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದವನ್ನೂ ಪ್ರಸಾದಗಳನ್ನೂ ನೀಡಲಾಯಿತು.

### ತಿ.ತಿ.ದೇ. ಉದ್ಯೋಗಿಗೆ ಶ್ರಮಶಕ್ತಿ ಪ್ರಶಸ್ತಿ

ತಿ. ತಿ. ದೇವಸ್ಥಾನಗಳಲ್ಲಿ ಅಸಿಸ್ಟೆಂಟ್ ಇಂಜನೀಯರ್ ಆಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಸದಾಶಿವಕುಮಾರ್ ಅವರಿಗೆ ಮೇ ಡೇ ದಿನಾಚರಣೆಯ ಸಂದರ್ಭದಲ್ಲಿ ಪ್ರತಿವರ್ಷವೂ ಆಂಧ್ರಪ್ರದೇಶ ಸರ್ಕಾರ ಕೊಡಮಾಡುವ ಶ್ರಮಶಕ್ತಿ ಪ್ರಶಸ್ತಿ ಸಂದಿದೆ. ಶ್ರಮಶಕ್ತಿ ಪ್ರಶಸ್ತಿಗೆ ನೂರು ಹೆಸರುಗಳು ಆಂಧ್ರದ ನಾನಾ ಕಡೆಗಳಿಂದ ಬಂದಿರಲು ಅವುಗಳಲ್ಲಿ ಹದಿನಾಲ್ಕು ಮಂದಿಯನ್ನು ಆಂಧ್ರ ಸರ್ಕಾರ ಆಯ್ಕೆ ಮಾಡಿದ್ದು, ಈ ಹದಿನಾಲ್ಕರಲ್ಲಿ ಒಂದು ಶ್ರೀ ಸದಾಶಿವಕುಮಾರ್ ಅವರ ಪಾಲಿನದಾಗಿದೆ.

ಮುಖ್ಯಮಂತ್ರಿ ಚಂದ್ರಬಾಬುನಾಯುಡು ಅವರು ಶ್ರೀ ಸದಾಶಿವ ಕುಮಾರ್ ಅವರಿಗೆ ಶ್ರಮಶಕ್ತಿ ಪ್ರಶಸ್ತಿಯನ್ನು ಬುಧವಾರ ಮೇ 1 ರಂದು ನೀಡಿದರು. ★

Edited and Published on behalf T. T. Devasthanams by Dr. N. S. Ramamutny and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ "**ಓಂ ನಮೋ ವೇಂಕಟೇಶಾಯ**" ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗುಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.